# ನಮ್ಮ ಮಾನಸ

**ಸೆಪ್ಟೆಂಬರ್ 2008**

ಸಂಪುಟ : 2 ಸಂಚಿಕೆ : 5

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*© : 26757159*


## ಪರಿವಿಡಿ



*ಮುಖಪುಟ ಚಿತ್ರ ಕೃಪೆ : ಜನವಾದಿ ಮಹಿಳಾ ಸಂಘಟನೆ*



•

*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ಓದುಗರ ಗಮನಕ್ಕೆ

*ಓದುಗರೆಲ್ಲರ ಸಹಕಾರ ಹಾಗೂ ಪ್ರೋತ್ಸಾಹದಿಂದ 'ನಮ್ಮ ಮಾನಸ'ದ ಪ್ರಕಟಣೆ ಸಾಧ್ಯವಾಗಿದೆ. ಪತ್ರಿಕೆಗೆ ಓದುಗರ ಚಂದಾ ಹಣವೇ ಜೀವಾಳ. ಚಂದಾಹಣ ಕಳುಹಿಸಿ ಮತ್ತು ಚಂದಾ ನವೀಕರಿಸಬೇಕಾದವರು ನವೀಕರಿಸಿ ಪತ್ರಿಕೆಯನ್ನು ಆರ್ಥಿಕವಾಗಿ ಸದೃಢಗೊಳಿಸಬೇಕೆಂದು ವಿನಮ್ರವಾಗಿ ಕೋರುತ್ತೇವೆ.*

**ವಾರ್ಷಿದ ಚಂದಾ – *100/–* ರೂ.**


## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ*

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ಶೌಚಾಲಯದಂಥ ಅತ್ಯಗತ್ಯ ಸೌಲಭ್ಯವನ್ನೂ ಕೊಡದ ವ್ಯವಸ್ಥೆ

ಮನೆಯಲ್ಲಿ ಶೌಚಾಲಯವಿರದ ಗ್ರಾಮೀಣ ಮಹಿಳೆಯರು ಕತ್ತಲಾಗುವುದನ್ನೇ ಕಾಯಬೇಕಾಗುತ್ತದೆ. ತಮ್ಮ ದೈಹಿಕ ಬಾಧೆಯನ್ನು ತೀರಿಸಿಕೊಳ್ಳಲು ನಸುಕಿನಲ್ಲೆ ಎದ್ದು ಹೋಗಬೇಕು, ಇಲ್ಲವೇ ಸಂಜೆಯಾಗುವವರೆಗೆ ಕಾಯಬೇಕು. ಮನೆಯಿಂದ ಒಂದು ಅಥವಾ ಎರಡು ಕಿ.ಮೀ ನಡೆದು ಹೊಲದಕಡೆ ಹೋಗಬೇಕು. ಜೊತೆಗೆ ಭದ್ರತೆಗಾಗಿ ಯಾರನ್ನಾದರೂ ಕರೆದುಕೊಂಡು ಹೋಗಬೇಕು. ಅನಿವಾರ್ಯ ಸಂದರ್ಭದಲ್ಲಿ ಒಂಟಿಯಾಗಿ ಹೋಗಲೇಬೇಕಾಗುತ್ತದೆ. ಇಂತಹ ಸಂದರ್ಭಗಳನ್ನು ದುರ್ಬಳಕೆ ಮಾಡಿಕೊಂಡು ಅವರ ಮೇಲೆ ಅತ್ಯಾಚಾರ, ಲೈಂಗಿಕ ದೌರ್ಜನ್ಯ ನಡೆಸಿದ ನಿದರ್ಶನಗಳು ಸಾಕಷ್ಟಿವೆ. ಇತ್ತೀಚೆಗೆ ಗಿಡಮರಗಳ ನಾಶದಿಂದ ನಿರ್ಜನ ಪ್ರದೇಶದ ಕೊರತೆ, ಭಯ, ಗಾಬರಿ, ಅಭದ್ರತೆ, ಸದಾ ಬೇರೆಯವರನ್ನು ಅವಲಂಬಿಸಿರಬೇಕಾದ ಸ್ಥಿತಿ, ನೀರಿನ ಕೊರತೆ ಮಹಿಳೆಯರಲ್ಲಿ ಒಂದು ವಿಚಿತ್ರ ಮಾನಸಿಕ ಒತ್ತಡವನ್ನು ಹೇರುತ್ತಿದೆ. ಸದಾ ತಮ್ಮನ್ನು ತಾವು ನಿಯಂತ್ರಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಇದು ಅವರ ದೈಹಿಕ ಹಾಗೂ ಮಾನಸಿಕ ಆರೋಗ್ಯದ ಮೇಲೂ ಪರಿಣಾಮವನ್ನು ಬೀರುತ್ತದೆ. ಋತುಚಕ್ರದ ಸಂದರ್ಭದಲ್ಲಿ, ಅನಾರೋಗ್ಯದ ಸಂದರ್ಭದಲ್ಲಿ ಮಹಿಳೆಯರು ಎದುರಿಸುವ ಸಮಸ್ಯೆ ಹೇಳಲಸಾಧ್ಯವಾದುದು.

ಗ್ರಾಮೀಣ ಪರಿಸರದಲ್ಲಿನ ಕುಟುಂಬದಲ್ಲಿ ಮಹಿಳೆಯರ ಈ ಅಗತ್ಯಕ್ಕೆ ಸ್ಪಂದಿಸದೆ ಪುರುಷರು ದಿವ್ಯ ನಿರ್ಲಕ್ಷ್ಯವನ್ನು ತೋರಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಸ್ವಂತ ಮನೆ ಕಟ್ಟಿಕೊಳ್ಳುವಾಗಲೂ ಹೆಣ್ಣುಮಕ್ಕಳು ಶೌಚಾಲಯ ಕಟ್ಟಿಸುವ ಬಗ್ಗೆ ಮಾತನಾಡಿದರೆ, ಸಾಮಾನ್ಯವಾಗಿ ಕೇಳಿಬರುವ ಮಾತೆಂದರೆ 'ನಿಮ್ಮಪ್ಪನ್ ಮನೆಯಿಂದ ಹಣ ತೆಗೊಂಡು ಬಾ' ಎಂದೋ, 'ಕೆರೆ, ಹೊಲ ಇಲ್ವೆ'? ಎಂದೋ ಆಗಿರುತ್ತದೆ.

ಶೌಚಾಲಯವಿರದ ಎಷ್ಟೋ ಶಾಲಾ ಕಾಲೇಜುಗಳೂ ನಮ್ಮಲ್ಲಿವೆ. ಅಸಂಘಟಿತ ಕ್ಷೇತ್ರಗಳಲ್ಲಿ, ಗಾರ್ಮೆಂಟ್ಸ್ ಫ್ಯಾಕ್ಟರಿಗಳಲ್ಲಿ, ಸಣ್ಣಪುಟ್ಟ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರಿಗೆ ಶೌಚಾಲಯದ ಅನುಕೂಲವಿರುವುದಿಲ್ಲ. ಕೆಲವೊಮ್ಮೆ ಶೌಚಾಲಯವಿದ್ದರೂ ಬಳಸಲಾಗದಷ್ಟು ದುಃಸ್ಥಿತಿಯಲ್ಲಿದ್ದು, ಅಶ್ಲೀಲವಾದ ಗೋಡೆ ಬರಹಗಳಿಂದ ಕೂಡಿರುತ್ತದೆ.

ಬಿ.ಟಿ.ಎಸ್.ನಲ್ಲಿ ನಿರ್ವಾಹಕಿಯರಾಗಿರುವ ಮಹಿಳೆಯರು ಬ್ರೇಕ್ ಸಮಯದವರೆಗೆ, ಅಥವಾ ಕೊನೆಯ ಬಸ್ ನಿಲ್ದಾಣದವರೆಗೆ ಕಾಯಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಯಾರನ್ನಾದರೂ ಪರಿಚಯ ಮಾಡಿಕೊಂಡು ಅವರ ಮನೆಗಳಿಗೆ ಹೋಗಬೇಕಾಗುತ್ತದೆ. ಮುಜುಗರ, ನಾಚಿಕೆಯಿಂದ ಕೇಳುವುದು ಕಷ್ಟವಾಗಿ ದೈಹಿಕ ಬಾಧೆಯನ್ನು ನಿಯಂತ್ರಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಗ್ರಾಮಾಂತರ ಸಾರಿಗೆ ಮತ್ತು ರಾತ್ರಿ ವೇಳೆಯಲ್ಲಿ ಬಸ್‌ಗಳಲ್ಲಿ ನಿರ್ವಾಹಕಿಯಾಗಿರುವ ಮಹಿಳೆಯರ ಸ್ಥಿತಿಯಂತೂ ಶೋಚನೀಯ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಅರವತ್ತಕ್ಕೂ ಹೆಚ್ಚು ವರ್ಷಗಳಾದವು. ನಮ್ಮ ದೇಶದ ಎಷ್ಟು ಜನರಿಗೆ ಸ್ವಾತಂತ್ರ್ಯದ ನಿಜವಾದ ಫಲ ದೊರೆತಿದೆ? ಇಂದಿಗೂ ಬಹುಪಾಲು ಜನರು ಮೂಲಭೂತ ಸೌಲಭ್ಯಗಳ ಕೊರತೆಯಿಂದ ನರಳುತ್ತಿದ್ದಾರೆ. ಗಾಮೀಣ ಪ್ರದೇಶದ ಜನರು ಹಾಗೂ ನಗರ ಪ್ರದೇಶಗಳ ಸ್ಲಂಗಳಲ್ಲಿ ವಾಸಿಸುವ ಜನರು ದೈನಂದಿನ ಬದುಕಿನ ಅಗತ್ಯಗಳನ್ನು ಪೂರೈಸಿಕೊಳ್ಳುವುದಕ್ಕಾಗಿಯೇ ಹೋರಾಡ ಬೇಕಾದ ಅನಿವಾರ್ಯತೆ ಅವರ ಮುಂದಿದೆ. ಮೂಲಭೂತ ಸೌಲಭ್ಯಗಳಾದ ವಸತಿ, ನೀರು, ವಿದ್ಯುಚ್ಛಕ್ತಿ, ಆರೋಗ್ಯ, ನೈರ್ಮಲ್ಯ, ಶೌಚಾಲಯ, ರಸ್ತೆ, ವಾಹನ ಮೊದಲಾದ ಸೌಕರ್ಯಗಳ ಕೊರತೆಯಿಂದ ಜನರು ನರಳುತ್ತಿದ್ದಾರೆ. ಶೇ. 70ರಷ್ಟು ಜನರು ಶೌಚಾಲಯದ ಸೌಲಭ್ಯದ ಕೊರತೆಯನ್ನು ಎದುರಿಸುತ್ತಿದ್ದಾರೆಂದರೆ ಅದಕ್ಕಿಂತ ನಾಚಿಕೆಗೇಡಿನ ಸಂಗತಿ ಇನ್ನೊಂದಿರಲಾರದು.

ಇಂದು ಸರ್ಕಾರ ಹಾಗೂ ಜನಪ್ರತಿನಿಧಿಗಳ ಆದ್ಯತೆ ಭಿನ್ನವಾಗಿವೆ. ವಿಶೇಷ ಆರ್ಥಿಕ ವಲಯದ ಸ್ಥಾಪನೆ, ವಿದೇಶಿ ಬಂಡವಾಳಕ್ಕೆ ಆಹ್ವಾನ, ಕೈಗಾರಿಕೋದ್ಯಮಿಗಳಿಗೆ ಮಣೆಹಾಕುವುದು, ಇವು ಅವರ ಪ್ರಮುಖ ಅಜೆಂಡಾಗಳು. ಕೈಗಾರಿಕೆಗಳ ಸ್ಥಾಪನೆಗೆ 400–500 ಎಕರೆ ಜಮೀನು ನೀಡುವುದು, ರಿಯಾಯಿತಿ ದರದಲ್ಲಿ ವಿದ್ಯುತ್, ನೀರು, ರಸ್ತೆಯ ವ್ಯವಸ್ಥೆ ಮಾಡಿಕೊಡುವುದು, ಹೈಟೆಕ್ ಆಸ್ಪತ್ರೆ, ಹೈಟೆಕ್ ವ್ಯಾಪಾರಿ ಶಿಕ್ಷಣ ಇವುಗಳ ಕಡೆಯೇ ಸರ್ಕಾರದ ಕಣ್ಣು. ಈ ಆದ್ಯತೆಗಳ ಹಿಂದೆ ವೈಯಕ್ತಿಕ ಲಾಭವಿರುವುದರಿಂದ ರಾಜಕಾರಣಿಗಳು ಹಾಗೂ ಅಧಿಕಾರಶಾಹಿಗಳು ನೇರವಾಗಿ ಹಾಗೂ ಪರೋಕ್ಷವಾಗಿ ಕುಮ್ಮಕ್ಕು ನೀಡುತ್ತಾರೆ.

ಇವುಗಳೊಂದಿಗೆ ಬೆಳೆಯುತ್ತಿರುವ ಹಾಗೂ ಬೆಳೆಸುತ್ತಿರುವ ಕೋಮುವಾದ, ಕೋಮುಸಂಘರ್ಷ, ಮತಾಂಧತೆ, ಭಯೋತ್ಪಾದನೆಯ ಸಮಸ್ಯೆ. ಪ್ರಭುತ್ವದ ಹಾಗೂ ಜನತೆಯ ಗಮನವನ್ನು ಸದಾ ಸೆಳೆಯುತ್ತಿರುತ್ತವೆ. ಹೀಗಾಗಿ ಸಾಮಾನ್ಯ ಜನತೆಯ ಮೂಲಭೂತ ಸಮಸ್ಯೆಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ, ಕಡೆಗಣಿಸಲ್ಪಡುತ್ತವೆ.

ಗ್ರಾಮೀಣ ಪ್ರದೇಶದ ಹಾಗೂ ನಗರ ಪ್ರದೇಶಗಳಲ್ಲಿ, ಸ್ಲಂಗಳಲ್ಲಿ, ಜೋಪಡಿಗಳಲ್ಲಿ, ತಾತ್ಕಾಲಿಕ ಶೆಡ್‌ಗಳಲ್ಲಿ ವಾಸಿಸುವ ವಸತಿಹೀನ ಮಹಿಳೆಯರಿಗೆ ಶೌಚಾಲಯದ್ದು ಅತ್ಯಂತ ಗಂಭೀರವಾದ ಸಮಸ್ಯೆ. ಇತ್ತೀಚೆಗೆ ಬೆಂಗಳೂರು ನಗರದಲ್ಲಿ ಕಟ್ಟಡ ಕಾಮಗಾರಿಯ ಸ್ಥಳದಲ್ಲಿ ನಿರ್ಮಿತವಾದ ತಾತ್ಕಾಲಿಕ ಶೆಡ್‌ನಲ್ಲಿ ಪೋಷಕರೊಂದಿಗೆ ವಾಸಿಸುತ್ತಿದ್ದ ವಿದ್ಯಾರ್ಥಿನಿ ಈ ಕಾರಣದಿಂದಲೇ ಕೊಲೆಯಾಗಿದ್ದಾಳೆ. ಈ ಮುಗ್ಧ ಹೆಣ್ಣು ಮಗುವಿನ ಸಾವು ಸ್ವತಂತ್ರ ಭಾರತದ ಮಹಿಳೆಯರು ದೈನಂದಿನ ಜೀವನದಲ್ಲಿ ಎದುರಿಸಬೇಕಾದ ಹಲವಾರು ಸಮಸ್ಯೆಗಳಿಗೆ ಹಿಡಿದ ಕನ್ನಡಿಯಾಗಿದೆ.

ದೂರದ ಊರುಗಳಿಗೆ ಹಾಗೂ ರಾತ್ರಿ ಪ್ರಯಾಣ ಮಾಡುವ ಮಹಿಳೆಯರಿಗೆ ಇರುವ ಶೌಚಾಲಯದ ವ್ಯವಸ್ಥೆ ತುಂಬಾ ಕಡಿಮೆ. ಕೆಲವು ಪ್ರಮುಖವಾದ ಕೆಲವೇ ಹೈವೇಗಳಲ್ಲಿ ಇಂತಹ ಸೌಲಭ್ಯಗಳಿವೆಯಾದರೂ ಜಿಲ್ಲಾ ಮಟ್ಟದಲ್ಲಿ, ತಾಲ್ಲೂಕು ಮಟ್ಟಗಳಲ್ಲಿ ಈ ಕೊರತೆ ಹೆಚ್ಚಾಗಿ ಕಂಡುಬರುತ್ತದೆ. ಒಂಟಿಯಾಗಿ ಪ್ರಯಾಣಿಸುವ ಮಹಿಳೆಯರು, ಕಾಲುನೋವು, ಮಂಡಿನೋವು, ಸಕ್ಕರೆ ಕಾಯಿಲೆಯಿಂದ ಬಳಲುವ ಮಹಿಳೆಯರು ಹಣ ನೀಡಿದರೂ ಕೆಲವೊಮ್ಮೆ ಶೌಚಾಲಯದ ವ್ಯವಸ್ಥೆ ಇರುವುದಿಲ್ಲ.

ತಮ್ಮ ದೈಹಿಕ ಬಾಧೆಯನ್ನು ನಿಯಂತ್ರಿಸಿಕೊಳ್ಳಲು ಸಾಮಾನ್ಯವಾಗಿ ಬಹುಪಾಲು ಮಹಿಳೆಯರು ಕಂಡುಕೊಂಡ ಒಂದು ಉಪಾಯವೆಂದರೆ ನೀರನ್ನು ಕಡಿಮೆ ಕುಡಿಯದಿರುವುದು. ದುಡಿಯುವ ಮಹಿಳೆಯರು ಒಮ್ಮೆ ಮನೆ ಬಿಟ್ಟ ಮೇಲೆ ನೀರು ಕುಡಿಯುವುದು ಪುನಃ ಮನೆಗೆ ಬಂದ ಮೇಲೆಯೇ. ಇದು ಅವರ ಆರೋಗ್ಯದ ಮೇಲೆ ತೀವ್ರವಾದ ಪರಿಣಾಮವನ್ನು ಬೀರುತ್ತದೆ. ತುಂಬಾ ಸಮಯದವರೆಗೆ ಮೂತ್ರ ನಿಯಂತ್ರಣ ಮಾಡುವುದರಿಂದ ಮೂತ್ರದ್ವಾರದ ಸೋಂಕು ಉಂಟಾಗುತ್ತದೆ. ಒಮ್ಮೆ ಈ ಸೋಂಕು ಉಂಟಾದರೆ ಇದಕ್ಕೆ ತಾತ್ಕಾಲಿಕ ಚಿಕಿತ್ಸೆ ಪಡೆಯಬಹುದೆ ವಿನಃ ಖಾಯಂ ಆದ ಚಿಕಿತ್ಸೆ ಸಾಧ್ಯವಿಲ್ಲ. ಮೂತ್ರಕೋಶದಲ್ಲಿ ಕಲ್ಲು ರಚನೆಯಾಗುತ್ತದೆ. ಸಮಸ್ಯೆ ತೀವ್ರವಾದಾಗ ಕಿಡ್ನಿಯಲ್ಲೂ ಕಲ್ಲು ರಚನೆಯಾಗಬಹುದು. ಕೆಲವೊಮ್ಮೆ ಮೂತ್ರಕೋಶದಲ್ಲಿ ಸಂಗ್ರಹವಾದ ಮೂತ್ರ ಕಿಡ್ನಿಗೆ ವಾಪಸ್ ಹೋಗುವ ಸಂಭವವೂ ಉಂಟಾಗಬಹುದು, ಕಿಡ್ನಿ ಸಹ ವಿಫಲವಾಗಬಹುದು. ಗರ್ಭಕೋಶದ ಹೊರಭಾಗಕ್ಕೆ ಸೋಂಕು ತಗಲಿ ತೀವ್ರ ಅಸ್ವಸ್ಥತೆ ಉಂಟಾಗಬಹುದು. ಈ ಸಮಸ್ಯೆಯಿಂದ ಬಳಲುವ ಮಹಿಳೆಯರಿಗೆ ಮಕ್ಕಳಾಗುವ ಸಾಧ್ಯತೆ ಕಡಿಮೆ. ವಯಸ್ಕ ಮಹಿಳೆಯರಲ್ಲಿ ಗರ್ಭಕೋಶದೊಳಗೂ ಸೋಂಕು ತಗಲಿ ಗರ್ಭಕೋಶವನ್ನೆ ತೆಗೆಯಬೇಕಾಗಬಹುದು.

ನೀರು ಕಡಿಮೆ ಕುಡಿಯುವುದರಿಂದ ಮಹಿಳೆಯರು ನಿರ್ಜಲತೆಯಿಂದ ಬಳಲುತ್ತಾರೆ. ಅಜೀರ್ಣ, ಮಲಬದ್ಧತೆಯ ಜೊತೆಗೆ ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟುವುದರಿಂದ ಕಾಲುನೋವು, ಕೈಕಾಲು ಅದುರುವುದು, ಕೆಲವೊಮ್ಮೆ ಹೃದಯ ಸ್ಥಂಭನ ಆಗುವ ಸಾಧ್ಯತೆಯೂ ಇರುತ್ತದೆ. ದೈಹಿಕ ಹಾಗೂ ಮಾನಸಿಕ ಒತ್ತಡದಿಂದ ಸಮರ್ಥವಾಗಿ ಕೆಲಸ ಕಾರ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲ.

ಶೌಚಾಲಯದ ಸಮಸ್ಯೆಯನ್ನು ಪರಿಹರಿಸಲು ಗ್ರಾಮಪಂಚಾಯಿತಿ, ನಗರಸಭೆ, ಸರ್ಕಾರ ವಿಶೇಷ ಗಮನ ನೀಡಬೇಕಾಗುತ್ತದೆ. ಸ್ತ್ರೀಶಕ್ತಿ ಸಂಘಟನೆಗಳು, ನಗರ ಪ್ರದೇಶದ ಮಹಿಳೆಯರು ಸಂಘಟಿತರಾಗಿ ಶೌಚಾಲಯದ ಸೌಲಭ್ಯಕ್ಕಾಗಿ ಹೋರಾಟ ನಡೆಸಿದರೆ ಮಹಿಳೆ ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳಲು ಸಾಧ್ಯವಾಗುತ್ತದೆ.

* * *

ಈ ಸಂಚಿಕೆಯಲ್ಲಿ ಡಾ॥ ಎಚ್.ಎಲ್. ಪುಷ್ಪಾ ಅವರು 'ದಿ ಸೂಟ್' ಹಾಗೂ 'ನಾಗಮಂಡಲ' ನಾಟಕ ಪ್ರದರ್ಶನದ ಬಗ್ಗೆ ಗಂಭೀರವಾಗಿ ಚರ್ಚೆಮಾಡಿದ್ದಾರೆ. 'ನಮ್ಮ ಮಾನಸ'ವು ಕುಪ್ಪಳಿಯಲ್ಲಿ 'ಮಹಿಳೆ, ಅನುಭವ-ಅಭಿವ್ಯಕ್ತಿ' ಕುರಿತಂತೆ ಎರಡು ದಿನದ ಸಂವಾದ ಕಾರ್ಯಕ್ರಮ ನಡೆಸಿದಾಗ ರಂಗಭೂಮಿ ಕುರಿತ ಗೋಷ್ಠಿಯಲ್ಲಿ 'ದಿ ಸೂಟ್' ನಾಟಕ ಚರ್ಚೆಗೆ ಬಂದಿತ್ತು. ನಾಯಕಿ ಕೊನೆಯಲ್ಲಿ 'ಸೂಟ್'ಅನ್ನು ಅಪ್ಪಿ, ಒಪ್ಪಿಕೊಳ್ಳುವುದರ ಸರಿ-ತಪ್ಪುಗಳು ಚರ್ಚೆಯ ವಿಷಯವಾಗಿತ್ತು. ಹಾಗೆಯೇ ಇಲ್ಲಿ ಹೇಳಲಾದ 'ನಾಗಮಂಡಲ' ನಾಟಕವು ಬಿ. ಜಯಶ್ರೀ ಅವರ ನಿರ್ದೇಶನದಲ್ಲಿ ಪ್ರದರ್ಶನಗೊಂಡದ್ದೂ ಉಲ್ಲೇಖಾರ್ಹ. ಏಕೆಂದರೆ ಜಯಶ್ರೀ ಅವರು ಕಾರ್ನಾಡರ ಕೃತಿಯ ಒಂದು ಸಾಲನ್ನೂ ಬದಲಾಯಿಸದೆ, ಕೃತಿಯೊಳಗಿನಿಂದಲೇ ಹೆಕ್ಕಿ ತೆಗೆದ ಹಲವು ಸಾಲುಗಳು ಗಂಭೀರವಾದ ಚಿಂತನೆಗೆ ದಾರಿ ಮಾಡಿದ್ದವು. ನಾಯಕಿ ಇರುಳಿನಲ್ಲಿ ಬರುವ ನಾಗಪ್ಪನನ್ನು ಪ್ರಜ್ಞಾಪೂರ್ವಕವಾಗೇ ಸ್ವೀಕರಿಸಿದಳೆಂಬ ಸತ್ಯ ಆ ಪ್ರಯೋಗದಲ್ಲಿ ಹೊರಬಿದ್ದಿತ್ತು. ಅದು ಅವಳ ಮೇಲೆ ಹೇರಲಾದ ಪುರುಷ ಪ್ರಧಾನ ಮೌಲ್ಯಗಳಿಗೆ ಅವಳ ಪ್ರತಿಭಟನೆಯೂ ಆಗಬಲ್ಲುದು. ನೀಲಂಮಾನಸಿಂಗ್ ತಮ್ಮ ಪ್ರಯೋಗದಲ್ಲಿ ಅಭಿವ್ಯಕ್ತಿಗೆ ಪದೇ ಪದೇ ಬಳಸುವ ಬೆಂಕಿ ಮತ್ತು ನೀರಿನ ಪ್ರತಿಮೆಗಳು ಮುಖ್ಯವಾಗುತ್ತವೆ. ಆದರೂ ವರ್ತಮಾನಕ್ಕೆ ಸಂವಾದಿಯಾಗಿಸುವ ಪ್ರಯತ್ನದಿಂದಾಗಿ ಅವರು ಜನಪದ ಕತೆಗಿರುವ ವಿಶೇಷ ಆಯಾಮಗಳನ್ನು ಕಳೆದುಕೊಂಡರೆನ್ನಿಸಿತ್ತು. ಹಾಗಾಗಿ ಕೆಲವೆಡೆ ವಾಸ್ತವ-ಜನಪದಗಳು ವಿರೋಧಾಭಾಸಗಳೂ ಆದವು; ಪ್ರಶ್ನೆಗಳೂ ಹಾಗೇ ಉಳಿದವು.



# ಬಹುಮುಖೀ ವ್ಯಕ್ತಿತ್ವದ ಪಿ.ಆರ್. ಜಯಲಕ್ಷ್ಮಮ್ಮ

ಇತ್ತೀಚೆಗಷ್ಟೇ ಬಂಧುಮಿತ್ರರು, ಅಭಿಮಾನಿಗಳು ಜಯಲಕ್ಷಮ್ಮನವರ ಜನ್ಮ ಶತಮಾನೋತ್ಸವವನ್ನು ಆಚರಿಸಿದರು. ಆ ಸಂದರ್ಭದಲ್ಲಿ ಆಕೆಯ ಒಡನಾಟ ವಿದ್ದ ಹಲವರು ಆಕೆಯ ಸಾಧನೆ, ಬದುಕಿನಲ್ಲಿ ಕಾಪಾಡಿಕೊಂಡು ಬಂದ ಮೌಲ್ಯಗಳನ್ನು ಕುರಿತು ಮಾತನಾಡಿದರು. ಅದೇ ದಿನ ಶ್ರೀಮತಿ ವೆಂಕಮ್ಮನವರು ಸಂಪಾದಿಸಿದ 'ಸ್ಮರಣೀಯ ಚೇತನ ಸಮಾಜಮುಖಿ ಜಯಲಕ್ಷಮ್ಮ' ಕೃತಿಯನ್ನು ಲೋಕಾರ್ಪಣೆ ಮಾಡಲಾಯಿತು.

ಹಳೆ ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದ ಶೇಷಾದ್ರಿ ಅಯ್ಯರ್ ಅವರ ಅವಧಿಯಲ್ಲಿ ವಲಸೆ ಬಂದು, ಅನಂತರ ಇಲ್ಲಿಯವರೇ ಆಗಿ ಹೋದ ಹಲವರಲ್ಲಿ ಭವಾನಿ ಶಂಕರಅಯ್ಯರ್ ಅವರ ಕುಟುಂಬವೂ ಒಂದು. ತಮ್ಮ ಹತ್ತನೇ ವಯಸ್ಸಿನಲ್ಲೇ ಭವಾನಿಶಂಕರ ಅಯ್ಯರ್ ಅವರ ಕೈಹಿಡಿದು ಪುರ ಪ್ರವೇಶ ಮಾಡಿದವರು ಲಕ್ಷಮ್ಮ ಅಲಿಯಾಸ್ ತಾಯಮ್ಮ. ಈ ದಂಪತಿಗಳ ನಾಲ್ಕನೆಯ ಮಗಳು ಪಿ.ಆರ್. ಜಯಲಕ್ಷ್ಮಿ, ಆಕೆ ಬಹುಪಾಲು ಜನರಿಗೆ ಪ್ರೀತಿಯ 'ಅಕ್ಕಮ್ಮ'.

ಜಯಲಕ್ಷಮ್ಮ ಹುಟ್ಟಿದ್ದು ಹಾಸನದಲ್ಲಿ, 1908ರ ನವೆಂಬರ್ 18ರಂದು. ಜಯಲಕ್ಷಮ್ಮ ಓದಿದ್ದು ಏಳನೇ ತರಗತಿಯವರೆಗೆ, ವಿವಾಹವಾದದ್ದು 1920ರಲ್ಲಿ, ತನ್ನ ಹನ್ನೆರಡನೇ ವಯಸ್ಸಿಗೆ. ಆಕೆಯ ಪತಿ ಪಿ.ಆರ್. ರಾಮಯ್ಯ ಮುಂದೆ 'ತಾಯಿನಾಡು' ಪತ್ರಿಕೆಯ ಸಂಪಾದಕರಾಗಿ ಪ್ರಸಿದ್ಧರಾದರು. ರಾಮಯ್ಯನವರು ಎಂ.ಎಸ್ಸಿ ಪದವೀಧರ. ಅವರದು ದೊಡ್ಡ ಕುಟುಂಬ. ರಾಮಯ್ಯನವರಿಗೆ ಇದು ಎರಡನೆಯ ಮದುವೆ. ಅವರ ಮೊದಲ ಹೆಂಡತಿಯನ್ನೂ ಜೊತೆಗಿಟ್ಟುಕೊಂಡು ಸೌಹಾರ್ದದಿಂದ ಬಾಳಿದರು ಜಯಲಕ್ಷ್ಮಿ. ಈ ದಂಪತಿಗಳ ಮಕ್ಕಳಲ್ಲಿ ಒಬ್ಬರಾದ ರಾಮೇಶ್ವರಿ ವರ್ಮ ಇವತ್ತಿನ ಪ್ರಸಿದ್ಧ ಕಲಾವಿದೆ, ಮಹಿಳಾ ಪರ ಚಿಂತಕಿ. ಅತ್ಯಂತ ಪ್ರಸಿದ್ಧ ಅರ್ಥಶಾಸ್ತ್ರಜ್ಞ ಬ್ರಹ್ಮಾನಂದಂ ಕೂಡಾ ಈಕೆಯ ಮಗ. ಅಷ್ಟೇನೂ ಸ್ಥಿತಿವಂತರಲ್ಲದಿದ್ದರೂ ಸಂಸಾರವನ್ನು ಸರಿದೂಗಿಸಿದರು ಪಿ.ಆರ್. ಜಯಲಕ್ಷಮ್ಮ. ಇವೆಲ್ಲದರ ನಡುವೆಯೂ ಜಯಲಕ್ಷಮ್ಮನವರನ್ನು ಗಾಂಧೀತತ್ವಗಳು ಪ್ರಭಾವಿಸಿದವು. ಗಾಂಧೀಜಿಯವರು ಆಕೆಯ ಡೈರಿಯಲ್ಲಿ ಬರೆದ 'ಸುಖೇ ದುಃಖೇ ಸಮೇ ಕೃತ್ವಾ ಲಾಭಾ ಲಾಭೌ ಜಯಾ ಜಯೌ' ಎಂಬ ಗೀತೆಯ ವಾಕ್ಯ ಅವರ ಬದುಕಿಗೆ ಮಾರ್ಗದರ್ಶನವಾಯಿತು. ಪಿ.ಆರ್. ಜಯಲಕ್ಷಮ್ಮನವರ ಸಮಾಜಮುಖಿ ವ್ಯಕ್ತಿತ್ವ ಆಶ್ಚರ್ಯಕರವಾದದ್ದು. ಅವರ ಪತಿ ಪ್ರಕಟಿಸುತ್ತಿದ್ದ ತಾಯಿನಾಡು ಪತ್ರಿಕೆಗೆ ನೆರವು ನೀಡುವುದರೊಂದಿಗೆ ಪ್ರಾರಂಭವಾದ ಅವರ ಸಮಾಜಕಾರ್ಯ ಅವರ ಕೊನೆಗಾಲದವರೆಗೆ ನಿರಂತರವಾಗಿತ್ತು. 1957 ರಿಂದ 1962ರವರೆಗೆ ಕಾರ್ಪೊರೇಟರ್ ಆಗಿ ಹಾಗೂ 1963ರಿಂದ 1964ರವರೆಗೆ ಉಪಮೇಯರ್ ಆಗಿ ಕಾರ್ಯ ನಿರ್ವಹಿಸಿದ್ದರು. ಭಾರತೀಯ ಗ್ರಾಮೀಣ ಮಹಿಳಾ ಸಂಘದ ಶಾಖೆಯನ್ನು ಕರ್ನಾಟಕದಲ್ಲಿ ಪ್ರಾರಂಭಿಸಿ ಅನಾಥಮಕ್ಕಳಿಗೆ, ಮಹಿಳೆಯರಿಗೆ, ವೃದ್ಧರಿಗೆ, ವಸತಿಗೃಹ, ಕೊಳಚೆ ಪ್ರದೇಶದಲ್ಲಿ ಬಾಲವಾಡಿ ಮುಂತಾದವುಗಳ ಸ್ಥಾಪನೆಗೆ ಕಾರಣಕರ್ತರಾಗಿದ್ದರು. ಅಸಹಾಯಕ ಮಹಿಳೆಯರಿಗೂ ಸಂಘ ಸಂಸ್ಥೆಗಳು, ಮಹಿಳೆಯರ ವಿದ್ಯಾಭ್ಯಾಸ, ಅವರಿಗೆ ವಿವಿಧ ವೃತ್ತಿಪರ ತರಬೇತಿ, ಗ್ರಾಮೀಣ ಬಡ ಮಹಿಳೆಯರಿಗೆ ಹಸು ಕೊಡಿಸುವುದರ ಮೂಲಕ ಆರ್ಥಿಕ ಸಬಲತೆಗೆ ನೆರವು ನೀಡುವುದು, ಗ್ರಾಮಾಂತರ ಪ್ರದೇಶದಿಂದ ಬರುವ ಹೆಣ್ಣುಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಸೇರಿಸುವುದು, ಹೀಗೆ ಜಯಲಕ್ಷಮ್ಮನವರು ತೊಡಗಿಸಿಕೊಳ್ಳದ ಕ್ಷೇತ್ರಗಳಿಲ್ಲ. ಅನಾಥಮಕ್ಕಳಿಗೆ ಗೋಕುಲಂ ವಿದ್ಯಾಸಂಸ್ಥೆ, ಅನಾಥ ಶೋಷಿತ ಮಹಿಳೆಯರಿಗಾಗಿ ಅಬಲಾಶ್ರಮವನ್ನು ಸ್ಥಾಪಿಸಿ ಶಿಕ್ಷಣ, ತರಬೇತಿಯನ್ನು ನೀಡುತ್ತಿದ್ದರು. ಹಲವಾರು ಮಹಿಳಾಸಂಘ-ಸಂಸ್ಥೆಗಳಿಗೆ ನಿವೇಶನಗಳನ್ನು ಸಹ ದೊರಕಿಸಿ ಕೊಟ್ಟಿದ್ದರು. ಕಾರ್ಪೊರೇಷನ್‌ನಲ್ಲಿ ಕನ್ನಡ ಟೈಪರೈಟಿಂಗ್ ಪ್ರಾರಂಭವಾಗಲು ಜಯಲಕ್ಷಮ್ಮನವರು ಕಾರಣಕರ್ತರಾಗಿದ್ದರು. ವೈಯಕ್ತಿಕ ಜೀವನದಲ್ಲಿ ಸಂಪ್ರಾದಾಯಿಕ ನಡೆ ನುಡಿಗಳಿದ್ದರೂ ಅವರ ಸಮಾಜಮುಖಿ ಚಿಂತನೆ ಹಾಗೂ ಅಂತಃಕರಣ ಎಲ್ಲವನ್ನೂ ಮೀರಿ ತುಡಿಯುತ್ತಿದ್ದುದನ್ನು ಮೆಚ್ಚಲೇಬೇಕು.

1991ರ ಏಪ್ರಿಲ್ 20 ಆಕೆ ಸ್ವರ್ಗಸ್ಥರಾದರು. ಅವರ ಜನ್ಮ ಶತಮಾನೋತ್ಸವದ ನೆನಪಿನಲ್ಲಿ ಪ್ರಕಟವಾದ ಕೃತಿ 'ಸ್ಮರಣೀಯ ಚೇತನ'ದಲ್ಲಿಯ ವಿವಿಧ ಲೇಖಕರ ಅಭಿಪ್ರಾಯಗಳು ಅವರ ಬಹುಮುಖಿ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿವೆ :

**ಶಾ**ಶ್ವತಿ ಪ್ರಾರಂಭಿಸಿದಾಗ ಅದಕ್ಕೆ ಪ್ರಥಮವಾಗಿ ಪ್ರತಿಸ್ಪಂದಿಸಿದವರು ಜಯಲಕ್ಷಮ್ಮನವರು. ಸುಮಾರು 70 ವರ್ಷ ವಯಸ್ಸಿನ ಆ ಮಹಿಳೆ ನಮ್ಮ ಪಾದಯಾತ್ರೆಗೆ ನಾನು ಸೇರಿಕೊಳ್ಳುತ್ತೀನಿ ಅಂತ ಉತ್ಸಾಹದಿಂದ ಹೇಳಿದರು. 'ಶಾಶ್ವತಿ' ಶಾಶ್ವತವಾಗಿ ಇರಬೇಕು ಅನ್ನುವ ಉತ್ಸಾಹ ಅವರಿಗೆ. ಅವರು ರಸ್ತೇಲಿ ನಡೀತಾ ಇರಲಿಲ್ಲ ಓಡ್ಕೊಂಡು, ಓಡ್ಕೊಂಡು ಹೋಗ್ತಾ ಇದ್ದರು.

*–ಶಿಕ್ಷಣತಜ್ಞೆ ಚಿ.ನಾ. ಮಂಗಳ*

**ಅ**ವರು ನಗರ ಪಾಲಿಕೆಯ ಉಪಮೇಯರ್ ಆಗಿದ್ದಾಗ ಮಕ್ಕಳಕೂಟದ ಮೈದಾನಕ್ಕೆ "ಆರ್. ಕಲ್ಯಾಣಮ್ಮ ಆಟದ ಮೈದಾನ" ಅಂತ ಹೆಸರಿಡಲು ಕಾರಣಕರ್ತರಾದರು.

*–ಕೆ.ಟಿ. ಬನಶಂಕರಮ್ಮ,* ಶಿಕ್ಷಣತಜ್ಞೆ, ಸಮಾಜ ಸೇವಾಕರ್ತೆ

**ಕ**ರ್ನಾಟಕ ಕ್ಷೇಮಾಭಿವೃದ್ಧಿ ಸಲಹಾ ಸಮಿತಿಯ ಉಪಾಧ್ಯಕ್ಷೆಯಾಗಿದ್ದ ಅವಧಿಯಲ್ಲಿ ಅನೇಕ ದೀನ ದುರ್ಬಲ ಮಹಿಳೆಯರನ್ನು ಸೇರಿಸಿ ಒಂದು ಸಹಕಾರ ಸಂಘ ಸ್ಥಾಪಿಸಿ ಅವರುಗಳಿಗೆ ಬರುವ ಕೆಲಸಗಳಾದ ಹಪ್ಪಳ, ಸಂಡಿಗೆ, ಉಪ್ಪಿನ ಕಾಯಿ, ಸಾರಿನಪುಡಿ ಇತ್ಯಾದಿಗಳನ್ನು ಮಾಡಿಸುತ್ತಿದ್ದರು. ಅವರು ತಯಾರಿಸುತ್ತಿದ್ದ ಪದಾರ್ಥಗಳಿಗೆ ಮಾರುಕಟ್ಟೆ ಒದಗಿಸಲು ಒಂದು ಅಂಗಡಿಯನ್ನು ಬಾಡಿಗೆಗೆ ಹಿಡಿಸಿಕೊಟ್ಟಿದ್ದರು. ಆ ಅಂಗಡಿ ಈಗ ದೊಡ್ಡದಾಗಿ ಇಂದಿಗೂ ಡಿ.ವಿ.ಜಿ. ರಸ್ತೆಯಲ್ಲಿದ್ದು ಅಲ್ಲಿ 'ಮಹಿಳಾ ಉದ್ಯಮಿಗಳು ಉತ್ಪಾದಿಸಿದ ವಸ್ತುಗಳು ಇಲ್ಲಿ ದೊರೆಯುತ್ತವೆ' ಎಂಬ ನಾಮಫಲಕವಿದೆ.

*–ಟಿ.ಎಸ್. ರುಕ್ಮಾಯಿ,* ಲೇಖಕಿ, ಸಮಾಜ ಸೇವಕಿ


ವಿಜಯಲಕ್ಷ್ಮಿ ಪಂಡಿತ್‌ರೊಡನೆ ಸಮಾಲೋಚನೆ


ರಾಷ್ಟ್ರಪತಿ ಡಾ॥ ರಾಧಾಕೃಷ್ಣನ್ ಅವರನ್ನು ಭೇಟಿ ಮಾಡಿದಾಗ


ಮೆಚ್ಚಿನ ನಾಯಕಿ ಇಂದಿರಾಗಾಂಧಿಯವರೊಡನೆ ಸಖ್ಯ ಧೀರ್ಘಕಾಲದ್ದು


ಏನೀಗ? ನಾನೇ ಅಡಿಗೆ ಮಾಡಿಕೊಳ್ಳಲು ಸಿದ್ಧ! ಆದರೆ 'ಮಡಿ' ಮಾತ್ರ 'ಬಿಡೆ'

"ಸಾಮಾನ್ಯವಾಗಿ ಎಲ್ಲ ಸಂಸ್ಥೆಗಳ ಗುರಿಯೂ ಒಳ್ಳೆಯದಾಗಿಯೇ ಇರುತ್ತದೆ. ಸಂಸ್ಥೆ ತನ್ನ ಆದರ್ಶದಿಂದ ಉರುಳಿದರೆ ಅದಕ್ಕೆ ಮುಖ್ಯ ಕಾರಣ ಅವರಲ್ಲಿರುವ ಕಾರ್ಯಕರ್ತರೆನ್ನಬೇಕು. ಸಾಮಾಜಿಕ ಸಂಸ್ಥೆಗಳು ತಮ್ಮ ಉದ್ದೇಶಕ್ಕೆ ತಕ್ಕಂತೆ ಹೆಚ್ಚು ಜನರಿಗೆ ಉಪಯುಕ್ತವಾಗಬೇಕಾದರೆ ಆ ಸಂಸ್ಥೆಯಲ್ಲಿ ಕೆಲಸ ಮಾಡುವ ಎಲ್ಲಾ ವ್ಯಕ್ತಿಗಳಲ್ಲಿ ಸೇವಾ ಮನೋಭಾವ ಇರಬೇಕಾದ್ದು ತುಂಬಾ ಮುಖ್ಯ. ಕೀರ್ತಿ, ಅಥವಾ ಇನ್ನಾವುದಾದರೂ ಆಮಿಷಕ್ಕೆ ಕಾರ್ಯಕರ್ತರು ಒಳಗಾದರೆಂದರೆ ಸಂಸ್ಥೆ ನಿಷ್ಪ್ರಯೋಜಕ" ಎಂಬುದು ಅವರ ನಿಲುವಾಗಿತ್ತು.

–ಎಚ್.ಎಸ್. ಪಾರ್ವತಿ
(ಜಯಮ್ಮನವರನ್ನು ಸಂದರ್ಶಿಸಿದ ಲೇಖನವೊಂದರಿಂದ)

"...ತಮ್ಮ ಅಂತರಂಗದ ಬದುಕನ್ನೂ ಸಮುದಾಯದ ಜೀವನವನ್ನೂ ಶ್ರೀಮಂತಗೊಳಿಸಿ ನಿಜವಾದ ವಿಶ್ವ ಕುಟುಂಬಿಯಾದರು. ಇನ್ನೊಬ್ಬರನ್ನು ನೋಯಿಸದೆ, ಗೌರವದ ಸಜ್ಜನಿಕೆಯಲ್ಲಿ ಬದುಕುವುದೇ ಶ್ರೇಷ್ಠವಾದುದು ಎಂದು ಅವರು ನಂಬಿದ್ದರು. ಹೃದಯದಲ್ಲಿ ತುಂಬಿದ್ದ ಪ್ರೀತಿಯನ್ನು ಇತರರಿಗೂ ಹಂಚಿದರು. ದೇಶದ ನೇತಾರರಿಂದ ಪ್ರಭಾವಿತರಾಗಿ ಜನಸಾಮಾನ್ಯರ ಹಿತ ಸಾಧನೆಗಾಗಿ ದುಡಿಯಲು ತೀರ್ಮಾನಿಸಿದ್ದರು. ಸಾಮಾನ್ಯ ಜನರ ಕಷ್ಟ ಕಾರ್ಪಣ್ಯಗಳಿಗೆ ಕರಗಿದ ಅವರ ಮನಸ್ಸು, ಅವರನ್ನು ದೀನ-ದಲಿತರ ಉದ್ಧಾರಕ್ಕೆ ದುಡಿಯಲು ಪ್ರೇರಿಸಿತು. ದೇಶಸೇವೆ ಕೈಗೊಂಡು ಸಮಾಜ ಮುಖಿಯಾಗಿ ಕಾಂಗ್ರೆಸ್ ಸೇರಿದರು. ಕಾರ್ಯಕ್ಷೇತ್ರ ವಿಸ್ತರಿಸಿತು. ಮುಂದೆ ಅಖಿಲ ಭಾರತ ರಾಜಕಾರಣಿಗಳೊಂದಿಗೆ ಸಂಪರ್ಕ ಪಡೆದರು. ಇಂದಿರಾಗಾಂಧಿ ಮೊದಲಾದವರ ಮೆಚ್ಚುಗೆ ಪಡೆದರು. ನಗರ ಸಭೆಗೆ ಕಾಂಗ್ರೆಸ್ ಅಭ್ಯರ್ಥಿಯಾಗಿ ಆರಿಸಿಬಂದರು. ಡೆಪ್ಯುಟಿ ಮೇಯರ್ ಆದರು. ... ಅವರ ಮನೆಯಲ್ಲಿ ಎಲ್ಲ ಜಾತಿಯ ಜನರಿಗೂ ಪ್ರವೇಶವಿತ್ತು. ಎಲ್ಲರನ್ನು ಒಂದೇ ದೃಷ್ಟಿಯಲ್ಲಿ ನೋಡಿ, ಸಹಾಯ-ಸವಲತ್ತು ಒದಗಿಸುತ್ತಿದ್ದರು. ಅನೇ ಸೇವಾ ಸಂಸ್ಥೆಗಳಲ್ಲಿ ದುಡಿದರು. ಹೆಣ್ಣುಮಕ್ಕಳು ಚೆನ್ನಾಗಿ ಓದಿ ಮುಂದೆ ಬರಬೇಕೆಂ ಮಹತ್ವಾಕಾಂಕ್ಷೆಯಿಂದ ಬಸವನಗುಡಿಯ ಅಬಲಾಶ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸಿ, ಭದ್ರವಾದ ಆರ್ಥಿಕ ಅಡಿಪಾಯ ಹಾಕಿಕೊಟ್ಟರು. ಸಮಯದ ಸದುಪಯೋಗ ಮಾಡಿಕೊಂಡ ಅ ತಮ್ಮ ಮನೆಯಲ್ಲೇ 'ಗೋಕುಲಂ ಗಾರ್ಡನ್ ಸ್ಕೂಲ್' ಪ್ರಾರಂಭಿಸಿದರು. ಮುಂದೆ ಅದಕ್ಕೆ ಸ್ವಂ ನಿವೇಶನ, ಕಟ್ಟಡ ಒದಗಿಸಿ, ಬಹುಪಾಲು ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ನೆರವಾದರು. ಅ ಏಕಕಾಲಕ್ಕೆ ಯೋಗಸ್ಥೆ-ಗೃಹಸ್ಥೆ ಆಗಿ ಬಾಳಿದರು.

–ಪಿ.ಆರ್. ಶ್ರೀನಿವಾಸನ್.

"ಮನೆ ಒಂದು ಧರ್ಮಛತ್ರದಂತಿತ್ತು, ಆ ಮನೆಯೆಂಬ ಧರ್ಮಛತ್ರದ ಪಾರುಪತ್ತೇಗಾರರು ಅಕ್ಕಮ್ಮ. ಮನೆ ಮಂದಿಗೆ ಊಟ, ತಿಂಡಿ ಒದಗಿಸುವುದು, ಸಹಾಯ ಕೇಳಿ ಬಂದವರಿಗೆ ನೆರವು ನೀಡುವುದು, ಕಷ್ಟ ಹೇಳಿಕೊಂಡು ಬಂದವರಿಗೆ ಹಣಕಾಸಿನ ನೆರವು ಇದೆಲ್ಲ ಅಕ್ಕಮ್ಮನ ಜವಾಬ್ದಾರಿ".

–ಎಚ್.ಎಸ್. ದೊರೆಸ್ವಾಮಿ,
(ಹಿರಿಯ ಪತ್ರಕರ್ತರು, ಸ್ವಾತಂತ್ರ್ಯ ಹೋರಾಟಗಾರರು)

"...ಅವರಿಗೆ ಪೂಜೆ ಪುನಸ್ಕಾರಗಳಲ್ಲಿ ಬಹಳ ನಂಬಿಕೆ, ... ಪ್ರತಿಯೊಂದು ಹಬ್ಬದ ಸಮಯದಲ್ಲೂ ಅದರ ಬಗ್ಗೆ ಲೇಖನ ಬರೆಯುತ್ತಿದ್ದರು. ಆಕಾಶವಾಣಿಯಲ್ಲಿ ಮಾತನಾಡುತ್ತಿದ್ದರು. ಮೂಢನಂಬಿಕೆಗಳೂ ಇದ್ದವು. ಶಕುನಗಳ ಬಗ್ಗೆ ಭಯ. ...ಜಾತಕ, ಜ್ಯೋತಿಷ್ಯ, ತಿಥಿ, ನಕ್ಷತ್ರಗಳಲ್ಲಿ ನಂಬಿಕೆ. ಇವೆಲ್ಲ ನಮಗೆ ತಮಾಷೆಯ ಸಂಗತಿಗಳು. ಆದರೆ ಅವರು ಎಂದೂ ಇತರರ ಮೇಲೆ ತಮ್ಮ ಅಭಿಪ್ರಾಯಗಳನ್ನು ಹೇರುತ್ತಿರಲಿಲ್ಲ.

ಸಮಾಜಕಲ್ಯಾಣ ಇಲಾಖೆಯಿಂದ ಮಕ್ಕಳಿಗೆ ಬಾಲವಾಡಿ ನಡೆಸಿ ಮಕ್ಕಳಿಗೆ ತಿಂಡಿ- ಕೊಡಿಸಿದರು. ಉಪಾಧ್ಯಕ್ಷರಾಗಿ ಮಾಡಿದರು. ಇದಕ್ಕಾಗಿ ಹಳ್ಳಿಹಳ್ಳಿಗೆ ತ್ತಿದ್ದರು. ಮಕ್ಕಳೇ ಬರದಿದ್ದ ಕಡೆ ಕಳಿಸಿ ಮಕ್ಕಳನ್ನು ಕರೆಸಿ ಹಾಜರಿ ಹಾಕಿಸು ತ್ತಿದ್ದರು. ಇದನ್ನು ವಿರೋಧಿಸುತ್ತಿದ್ದ ನನಗೆ


ಅಂದಿನ ಮುಖ್ಯಮಂತ್ರಿ ಶ್ರೀ ಕೆಂಗಲ್ ಹನುಮಂತಯ್ಯನವರೊಡನೆ


ಮೈಸೂರಿನ ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಅವರಿಂದ ಹಸ್ತಲಾಘವ

'ಯಾರ ಹೊಟ್ಟೆಯ ಮೇಲೂ ಹೊಡೆಯಬಾರದು' ಎನ್ನುತ್ತಾ ತಮ್ಮ ಖರ್ಚಿನಿಂದ ಅವರಿಗೆಲ್ಲ ತಿಂಡಿ ಕೊಡಿಸಿ ಮರುದಿನದಿಂದ ಶಾಲೆಗೆ ಬರಲು ಹೇಳುತ್ತಿದ್ದರು.

ಕಷ್ಟದಲ್ಲಿರುವ ವಯಸ್ಕ ಹೆಂಗಸರಿಗೆ ವಿದ್ಯಾಭ್ಯಾಸಕ್ಕಾಗಿ ಗ್ರಾಮೀಣ ಮಹಿಳಾ ಸಂಘ, ಗಾಯಿತ್ರಿ ಸಮಾಜ ಇತ್ಯಾದಿ ಪ್ರಾರಂಭಿಸಿ ಕಲಿಸಿದರು. ಅನಂತರ ಅವರಿಗೆ ಕೆಲಸ ಕೊಡಿಸಿದರು. ಹಸುಗಳನ್ನು ಸಾಲವಾಗಿ ಕೊಡಿಸಿ ಅವರ ಜೀವನಕ್ಕೆ ದಾರಿ ಮಾಡಿದರು. ಕಷ್ಟದಲ್ಲಿದ್ದ ಹೆಂಗಸರನ್ನು ತಾವೇ ಕರೆದೊಯ್ದು ಸಂಸ್ಥೆಗಳಲ್ಲಿ ಸೇರಿಸಿ, ಅನಂತರ ಅವರಿಗೆ ಸ್ವಂತ ಉದ್ಯೋಗಕ್ಕೆ ದಾರಿ ಮಾಡುತ್ತಿದ್ದರು.

ಬಸವನಗುಡಿಯ ಅಬಲಾಶ್ರಮ, ಮಕ್ಕಳಕೂಟ, ಅಶೋಕ ಶಿಶುವಿಹಾರ, ಮೂಕ ಮತ್ತು ಕಿವುಡು ತೊಂದರೆ ಇದ್ದವರಿಗಾಗಿ ಸಂಸ್ಥೆ ಹೀಗೆ ಅವರ ಕಾರ್ಯವ್ಯಾಪ್ತಿ ಬಹು ದೊಡ್ಡದು. *–ಗಾಯಿತ್ರಿ ವಿಶ್ವನಾಥ್*

**ಆ**ಕೆ ಒಳ್ಳೆಯ ಲೇಖಕಿಯಾಗಿದ್ದರು. ಒಮ್ಮೆ ಬದರಿಯಾತ್ರೆಗೆ ಹೋಗಿ ಬಂದ ಮೇಲೆ ಆ ವಿವರಗಳನ್ನು ಪುಸ್ತಿಕೆಯಾಗಿ ಪ್ರಕಟಿಸಿದರು. ಇತರರಂತೆ ಪ್ರಕೃತಿ ಸೌಂದರ್ಯ, ಭಕ್ತಿ ಭಾವ ಮಾತ್ರವಲ್ಲ, ತಾವು ದರ್ಶಿಸಿದ ಪ್ರದೇಶ ಸಮುದ್ರ ಮಟ್ಟದಿಂದ ಎಷ್ಟು ಎತ್ತರವಿದೆ. ಪ್ರತಿಯೊಂದು ಮುಖ್ಯ ಸ್ಥಳದ ಎತ್ತರ, ವಿಸ್ತಾರ, ಹವಾಮಾನ, ಪದಾರ್ಥಗಳ ಬೆಲೆ, ಎಲ್ಲ ವಿವರ ಕೊಟ್ಟರು. ಪ್ರಯಾಣ ಮಾಡುವವರು ಹೆಚ್ಚು ತೂಕವಿಲ್ಲದ ಪದಾರ್ಥ ಕೊಂಡೊಯ್ಯುವ ವಿವರ ಸಹ ಈ 'ಬದರಿಯಾತ್ರೆ' ಪ್ರಸ್ತಾಪದಲ್ಲಿ ಇತ್ತು. ದೂರಕ್ಕೆ ಒಂದು ಅಳತೆ ಬೇಕು, ಸಮಯಕ್ಕೆ ಒಂದು ಅಳತೆ ನೀಡಬೇಕು ಎನ್ನುವುದು ವೈಜ್ಞಾನಿಕ ಮತ್ತು ಆಧುನಿಕತೆಯ ಮನೋಭಾವದ ಹೆಗ್ಗುರುತು!... 'ಕಾವ್ಯಸ್ತೋತ್ರ ಮಂಜರಿ' ಅವರ ಮತ್ತೊಂದು ಕೃತಿ. *–ಪಿ.ಆರ್. ವಿಶ್ವನಾಥ್*

**ಬ**ಹಳ ದೀರ್ಘಾವಧಿ ಸೇವಾಕ್ಷೇತ್ರದಲ್ಲಿ ತೊಡಗಿದ್ದರಿಂದ ಅವರಿಗೆ ಹೆಚ್ಚು ಜನರ ಸಂಪರ್ಕ ಇತ್ತು. ಅವರ ಬಗ್ಗೆ ಎಲ್ಲರಿಗೂ ಬಹಳ ಗೌರವ ಇದ್ದುದರಿಂದ ಅವರಿಗೆ ನಕಾರ ಉತ್ತರ ಸಿಗುತ್ತಿರಲಿಲ್ಲ. ಒಂದು ಸ್ತ್ರೀ ಸಮಾಜದ ವಾರ್ಷಿಕೋತ್ಸವದ ಸಂದರ್ಭ ಬಹುಮಾನ ವಿತರಣೆ ಜಯಲಕ್ಷಮ್ಮನವರಿಂದ. ಆ ಸಮಯದಲ್ಲಿ ಅವರು ಹೆಣ್ಣುಮಕ್ಕಳನ್ನು ಕರೆದು "ಎಲ್ಲಿ ಆಟ ಆಡುತ್ತೀರಿ" ಎಂದು ಕೇಳಿದರು. ಆ ಹೆಣ್ಣುಮಕ್ಕಳು, 'ಮೇಡಂ ನಮಗೆ ಧೈರ್ಯ ಇಲ್ಲ ಗಂಡುಮಕ್ಕಳು ಬಂದುಬಿಡುತ್ತಾರೆ, ಅದಕ್ಕೆ ನಾವು ತುಂಬಾ ಮುಂಚೆ ಹೋಗಿ ಜಾಗ ಆಕ್ರಮಿಸಿಕೊಳ್ಳಬೇಕು' ಅಂತ ಹೇಳಿದರು. ಅದಾದ ಮೇಲೆ ಮೂರು ದಿವಸ ಮಳೆ ಬಂದು ರಜ ಇತ್ತು. ನಾಲ್ಕನೇ ದಿನ ಅಲ್ಲಿ ಹೋಗಿ ನೋಡಿದಾಗ ಫೀಲ್ಡ್‌ನಲ್ಲಿ ದೊಡ್ಡದಾಗಿ "ಹೆಣ್ಣು ಮಕ್ಕಳ ಆಟದ ಮೈದಾನ" ಅಂತ ಬೋರ್ಡ್ ಹಾಕಿತ್ತು! *–ಭಾರತಿ ಬಾಯಿ*

*(ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಜಯಲಕ್ಷಮ್ಮನವರ ಜೊತೆಯಲ್ಲಿ ಕೆಲಸ ಮಾಡಿದವರು)*

ಜಯಲಕ್ಷಮ್ಮನವರ ಮಗ ಪ್ರಸಿದ್ಧ ಅರ್ಥಶಾಸ್ತ್ರಜ್ಞ ಪಿ.ಆರ್. ಬ್ರಹ್ಮಾನಂದಂ ಅವರು ತಾಯಿಯ ಕೃತಿ ರಚನೆಯ ಬಗ್ಗೆ ಹೇಳುತ್ತಾ "... ಈ ಪುಸ್ತಕವನ್ನು ಓದಿದರೆ ಒಂದು ವಿಷಯ ಗೊತ್ತಾಗುತ್ತದೆ. ಮದುವೆಯಾದ ಕನ್ಯೆ ತನ್ನ ಗಂಡನನ್ನು ಬದುಕಿಸಿಕೊಳ್ಳುವ ಎರಡು ನಿದರ್ಶನಗಳಿವೆ. ಆದರೆ ಯಾವ ಗಂಡನೂ ಹೆಂಡತಿಯನ್ನು ಬದುಕಿಸಿದ ವಿಷಯವಿಲ್ಲ..." ಎನ್ನುತ್ತಾರೆ.

□

# ಹಂಬಲ

**ಅ**ಮ್ಮ ...
ಅನೇಕರು,
ನನ್ನ ಅಮ್ಮ, ನನ್ನ ಅವ್ವ, ನನ್ನ ತಾಯಿ
ಎಂದೆಲ್ಲ ಕವಿತೆ ಬರೆದು
ತಮ್ಮ ಅಮ್ಮಂದಿರ
ಜೀವನದ ಪರಿಯನ್ನು
ಅವರಿಂದ ತಮ್ಮ ಬದುಕು
ಹಸನಾದ ಬಗೆಯನ್ನು
ಆ ಪದ್ಯಗಳ ಸಾಲುಗಳಲ್ಲಿ ಹುದುಗಿಸಿ
ಅಮ್ಮಂದಿರಿಗೆ ನಮನಗಳನ್ನು
ಪ್ರೀತಿಯನ್ನು ಸಲ್ಲಿಸಿದ್ದಾರೆ.
ಆದರೆ,
ನಾನು ನನ್ನ ಅಮ್ಮನ ಬಗೆಗೆ ಕವಿತೆ
ಇರಲಿ
ಗದ್ಯ ರೂಪದಲ್ಲಾದರೂ-
ನನಗೆ ನಿನ್ನ ಬಗೆಗಿರುವ
ಪ್ರೀತಿಯನ್ನು
ನಾನು ನಿನ್ನ ಮಗಳಾಗಿ ಜನ್ಮತಾಳಿದ
ಧನ್ಯತೆಯನ್ನು
ನನ್ನ ಜೀವನದಲ್ಲಿ ನಿನ್ನ ಪ್ರಭಾವ
ಹಾಸುಹೊಕ್ಕಾಗಿರುವುದನ್ನು
ನನಗೆ ನಿನ್ನ ಬಗೆಗಿರುವ
ಅಭಿಮಾನವನ್ನು
ನನ್ನ ಅಸ್ಮಿತೆಯಲ್ಲಿ ಅಡಗಿರುವ ನಿನ್ನ
ಅಸ್ಮಿತೆಯನ್ನು
ನನ್ನ ಮನಸ್ಸು - ಹೃದಯದಲ್ಲಿ ನಿನ್ನ ಬಗ್ಗೆ
ತುಂಬಿಕೊಂಡಿರುವ
ಭಾವನೆಗಳನ್ನು
ಬರೆಯಬೇಕೆಂದು ಹಂಬಲಿಸಿದರೆ
ತಕ್ಕ ಪದಗಳೇ ಹೊಳೆಯುತ್ತಿಲ್ಲವಲ್ಲ!
ನನ್ನದದೆಷ್ಟು ದುರದೃಷ್ಟ!

ನಿನ್ನ
**ಗೌರು**
(ಪಿ.ಆರ್. ರಾಮೇಶ್ವರಿ ವರ್ಮ)



# ಮದುವೆ ? ಆತುರ ಏಕೆ?... ವಿಳಂಬ ಬೇಕೆ?

ಪಿ.ಆರ್. ಜಯಲಕ್ಷಮ್ಮ

*[ಸಂಪ್ರದಾಯಬದ್ಧರು, ಮಡಿವಂತ ಮಹಿಳೆ ಆದರೂ ಆ ದಿನಗಳಲ್ಲೇ ಜಯಲಕ್ಷಮ್ಮನವರ ಆಲೋಚನೆಗಳು ಮಹಿಳಾ ಪರವಾಗಿಯೂ ಗಂಭೀರವಾಗಿಯೂ ಇದ್ದವು]*

---

**ಈ** ಪ್ರಶ್ನೆಗೆ ಉತ್ತರ ಕೊಡಲು ಬಹಳ ಮಟ್ಟಿಗೆ ಯೋಚಿಸಲೇ ಬೇಕಾಗುತ್ತದೆ. ಮೊದಲು ಈ ಪ್ರಶ್ನೆ ಯಾವ ಕಾರಣಕ್ಕಾಗಿ ಹುಟ್ಟಿದೆ ಎಂಬುದನ್ನೂ ಯೋಚಿಸಬೇಕು. ಮದುವೆ, ಸಂಸಾರ, ಮಕ್ಕಳು, ಇವು ಮೂರು ಹೆಣ್ಣುಮಕ್ಕಳ ಜೀವನದ ನಾಡಿ. ಮೊದಲಾಗಿ ಮದುವೆಯೇ ಅವರ ಜೀವನದ ಒಂದು ಗುರಿ ಎಂದರೂ ಆತಿಶಯೋಕ್ತಿಯಾಗಲಾರದು. ಮದುವೆಯಾದರೆ ಅವರು ಒಂದು ನೆಲೆಯನ್ನು ಮುಟ್ಟಿದಂತೆ. ಆ ಹುಡುಗಿಯು ಎಷ್ಟೇ ವಯಸ್ಸಿಗೆ ಮದುವೆಯಾಗಲಿ ಮೊದಲಿಂದ ಕೊನೆಯವರೆಗೂ ತನ್ನ ಸಂಸಾರದಲ್ಲಿ ಅನೇಕ ಘಟನೆಗಳನ್ನು ಎದುರಿಸಿ ಕಷ್ಟಗಳನ್ನು ಸಹಿಸಿ, ಸುಖ ಸಂತೋಷಗಳನ್ನು ಅನುಭವಿಸಬೇಕಾಗುತ್ತದೆ. ಯಾವುದಕ್ಕೂ ಆಕೆ ಹಿಂಜರಿಯಲಾಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ನಮ್ಮ ಸಮಾಜವಿರುವಾಗ ಕನ್ಯೆಯರ ಮದುವೆ ವಯಸ್ಸು ಇಷ್ಟೇ ಇರಬೇಕೆಂದು ನಿರ್ಧರಿಸಿ ಹೇಳುವುದೂ ಕಷ್ಟ. ಅದರಂತೆ ನಡೆಯುವುದೂ ಕಷ್ಟ.

ಹಿಂದಿನಿಂದ ನಡೆದು ಬರುತ್ತಿರುವ ಮದುವೆ ವಿಷಯ ಯೋಚಿಸೋಣ. ಬಹಳ ಹಿಂದಿನ ಕಾಲದಲ್ಲಿ ಹೆಣ್ಣುಮಕ್ಕಳು ಗಾಂಧರ್ವವಿವಾಹ, ಸ್ವಯಂವರ ಮತ್ತು ತನಗೆ ಬೇಕಾದ ವರನನ್ನು ತಾನೇ ಹುಡುಕಿಕೊಂಡು ಬರುವುದು, ಈ ರೀತಿ ಮದುವೆಗಳು ನಡೆಯುತ್ತಿತ್ತು. ಕಾಲ ಕ್ರಮೇಣ ನಮಗೇ ತಿಳಿದಂತೆ ನಮ್ಮ ಮುತ್ತಜ್ಜಿಯವರ ಕಾಲದಲ್ಲಿ ತೊಟ್ಟಿಲಲ್ಲಿ ಮಗು ಮಲಗಿರುವಾಗಲೇ ಆ ಮಕ್ಕಳಿಗೆ ಗಂಡು ಹೆಣ್ಣು ಸಂಬಂಧ ತೀರ್ಮಾನಿಸಿ ತೊಟ್ಟಿಲ ತಾಳಿ ಎಂದು ಹೇಳಿ ನಂತರ ಅದರಂತೆ 5–7 ವರ್ಷಗಳಲ್ಲಿ ಮದುವೆ ಮಾಡಿಬಿಡುತ್ತಿದ್ದರಂತೆ.

ನಮ್ಮ ಮೈಸೂರು ದೇಶದಲ್ಲಿ ಚಾಮರಾಜ ಒಡೆಯರ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಏಳು ವರ್ಷಕ್ಕಿಂತ ಕಮ್ಮಿ ಮದುವೆ ಮಾಡಬಾರದೆಂದು ಕಾನೂನಾಯಿತು. ಋತುಮತಿಯಾಗುವುದರೊಳಗೆ ಮದುವೆ ಮಾಡಬೇಕೆಂಬ ಧರ್ಮಶಾಸ್ತ್ರವಿದ್ದುದರಿಂದ ಅನೇಕರು 10–12 ವರ್ಷಗಳಲ್ಲಿ ಮದುವೆ ಮಾಡುತ್ತಿದ್ದರು. ಅದನ್ನೂ ತಪ್ಪಿಸಬೇಕೆಂಬ ಉದ್ದೇಶದಿಂದ – ಕಾರಣ ಯಾವುದಾದರೂ ಇರಲಿ – 14 ವರ್ಷಗಳೊಳಗೆ ಹೆಣ್ಣುಮಕ್ಕಳಿಗೆ ಮದುವೆ ಮಾಡಕೂಡದೆಂಬ ಶಾರದಾ ಕಾನೂನನ್ನು ಇಂಡಿಯಾ ಸರ್ಕಾರವು ತಂದಿತು. ಆಗಲೂ ದೆಹಲಿಯಲ್ಲಿ ಅನೇಕ ಪ್ರತಿಭಟನೆಗಳಾದವು. ಇತ್ತೀಚೆಗೆ ನಮ್ಮ ಸಮಾಜದಲ್ಲಿ ಕಾಲಕಾಲಕ್ಕೆ ಅನುಗುಣವಾಗಿ ಶಾಸ್ತ್ರ ಸಂಪ್ರದಾಯಗಳು ಬದಲಾಯಿಸುತ್ತಲೇ ಹೋಗುತ್ತಿವೆ. ಯಾವ ನಿರ್ಬಂಧಗಳೂ ಇಲ್ಲದೆ, ಹೆದರಿಕೆಯೂ ಇಲ್ಲದೆ ಸುಮಾರು ನೂರಕ್ಕೆ 90ಕ್ಕಿಂತ ಹೆಚ್ಚಾಗಿ ಹೆಣ್ಣುಮಕ್ಕಳ ಮದುವೆಯು ವಯಸ್ಸಾದ ನಂತರವೇ ನಡೆಯುತ್ತಿದೆ. ವರದಕ್ಷಿಣೆ ಕೇಳುವುದು, ಗಂಡು–ಹೆಣ್ಣಿನ ಸಮ್ಮತಿ ಇರದೇ ಇರುವುದು, ಇನ್ನೂ ಅನೇಕ ಅವರವರ ತಾಪತ್ರಯಗಳಿಂದ ಮದುವೆ ನಿಧಾನವಾಗುತ್ತಲೇ ಬರುತ್ತಿದೆ.

ಹೆಣ್ಣುಮಕ್ಕಳ ವಿದ್ಯಾಭ್ಯಾಸ ಹೆಚ್ಚಿದಂತೆಲ್ಲಾ ಅವರುಗಳೂ ಕೂಡ ಮದುವೆ ಎಂಬುದರ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡಿರುತ್ತಾರೆ. ಮದುವೆಯಾದ ನಂತರ ತಮಗೂ ವ್ಯಕ್ತಿತ್ವ ಇರಬೇಕು. ಸಂಸಾರದಲ್ಲಿ ಸ್ಥಾನಮಾನಗಳು ಬೇಕು. ಮಧುರ ಬಾಂಧವ್ಯದಿಂದ ಕೂಡಿರಬೇಕು, ತಾವೂ ಕೆಲಸ ಕಾರ್ಯಗಳನ್ನು ಮಾಡಿ, ಆರ್ಥಿಕ ಮುಗ್ಗಟ್ಟಿನಲ್ಲಿ ಹಣ ಸಂಪಾದಿಸಬೇಕು ಎಂಬ ಭಾವನೆ ಬರುತ್ತಿದೆ. ಹೀಗೆ ಅನೇಕ ಕಾರಣಗಳಿವೆ. ಅಲ್ಲದೆ ಹುಡುಗಿಯರು ಬಡಪೆಟ್ಟಿಗೆ ಗಂಡುಗಳನ್ನು ಒಪ್ಪುವುದಿಲ್ಲ.

ಹೀಗೇ ಹಾಗೇ ಆಗಿ ಮದುವೆ ವಯಸ್ಸು ಬಹಳವಾಗಿಯೇ ಹೆಚ್ಚಿಕೊಂಡು ಹೋಗುತ್ತಿದೆ. ಇತ್ತೀಚೆಗೆ ಸರ್ಕಾರದವರು ಹೆಣ್ಣುಮಕ್ಕಳಿಗೆ 21 ವರ್ಷಗಳವರೆಗೂ ಮದುವೆ ಮಾಡಬಾರದೆಂಬ ಕಾನೂನನ್ನು ಯೋಚಿಸುತ್ತಿದ್ದಾರೆ. ಸಾಧಾರಣವಾಗಿ ಹೆಣ್ಣುಮಕ್ಕಳಿಗೆ 18 ವರ್ಷಗಳೊಳಗೇನೆ ಸಮಾಜದ ಅರಿವು ಚೆನ್ನಾಗಿ ಮನದಟ್ಟಾಗಿರುತ್ತದೆ. ಈಗಿನ ಕಾಲದ ವಿದ್ಯಾಭ್ಯಾಸದಂತೆ ಅವರು ಎಸ್.ಎಸ್.ಎಲ್.ಸಿ.ಯವರೆಗೂ ಓದಿ ಮುಗಿಸಿರುತ್ತಾರೆ. ನಂತರ ಅನೇಕ ಸಂಸಾರಗಳಲ್ಲಿ ಕಾರಣಾಂತರಗಳಿಂದ ಮುಂದಕ್ಕೆ ಓದಿಸಲು ಸಾಧ್ಯವಾಗುವುದಿಲ್ಲ.

ಒಂದು ವೇಳೆ ಆ ವಯಸ್ಸಿನಲ್ಲಿಯೇ ಸರಿಯಾದ ಗಂಡು ಆ ಹುಡುಗಿಗೆ ದೊರೆತರೂ ದೊರೆಯಬಹುದು. ಕಾನೂನಿನಂತೆ ಮದುವೆಯಾಗದೇ ಹೋದರೆ ಆ ಸಂಸಾರದಲ್ಲಿ ಕಷ್ಟ ನಷ್ಟಗಳಾಗಬಹುದು. ಅಲ್ಲದೆ ಹೆಣ್ಣುಮಕ್ಕಳಿಗೆ ವಯಸ್ಸು ಹೆಚ್ಚಿದಂತೆಲ್ಲಾ ಗಂಡು ಸಿಗುವುದೂ ಕೂಡ ಕಷ್ಟವಾಗುತ್ತದೆ. ಹೀಗೆ ಅನೇಕ ಕಾರಣಗಳಿರುವುದರಿಂದ ಮದುವೆ ವಯಸ್ಸು ಇಷ್ಟೇ ಎಂದು ತೀರ್ಮಾನಿಸಬಾರದು.

ನಮ್ಮ ದೇಶ ಹಳ್ಳಿಗಳ ದೇಶ ಮತ್ತು ಬಡ ದೇಶ. ಹಳ್ಳಿಗಳಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸ ಇನ್ನೂ ತಳಮಟ್ಟದಲ್ಲಿಯೇ ಇದೆ. ಎಷ್ಟೋ ಕಡೆ ಹೆಣ್ಣುಮಕ್ಕಳನ್ನು ಶಾಲೆಗೆ ಕೂಡ ಕಳುಹಿಸುವುದಿಲ್ಲ. ಹಳ್ಳಿಗಳಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚಾಗಿ ವಿದ್ಯಾಭ್ಯಾಸ ಕೊಡಬೇಕು. ಮತ್ತು ಅವರನ್ನು ನಾಗರೀಕರನ್ನಾಗಿ ಮಾಡಬೇಕು. ಅದಿಲ್ಲದೆ ಹೋದರೆ ಕಾನೂನು ಕಟ್ಟಲೆಗಳು ಏನೂ ಉಪಯೋಗವಾಗುವುದಿಲ್ಲ. ಮದುವೆ ಹೆಣ್ಣಿನ ವಯಸ್ಸನ್ನು 21 ವರ್ಷಕ್ಕೆ ಏರಿಸಿದರೆ ಮಕ್ಕಳ ಸಂಖ್ಯೆ ಕಡಿಮೆಯಾಗಬಹುದೇ ಎಂದು ಯೋಚಿಸೋಣ. ನಮ್ಮ ದೇಶದಲ್ಲಿ ಇತ್ತೀಚೆಗೆ ದಿನದಿನಕ್ಕೆ ಜನಸಂಖ್ಯೆ ಜಾಸ್ತಿಯಾಗುತ್ತಿರುವುದು ತಿಳಿದಿರುವ ವಿಷಯ. ಎಲ್ಲೆಲ್ಲೂ ಸಂತಾನ ನಿಯಂತ್ರಣವನ್ನು ಜಾರಿಗೆ ತರಬೇಕೆಂಬ ಕಾರ್ಯಗಳು ಹೆಚ್ಚಾಗಿ ನಡೆಯುತ್ತಿವೆ.

*(ಪುಟ 17 ನೋಡಿ)*

ಶ್ರೀಲಂಕೆಯ ಡಾ. ಕುಮಾರಿ ಜಯವರ್ದನೆ ಅವರು ದಕ್ಷಿಣ ಏಷ್ಯಾದ ಮೊದಲಹಂತದ ಸ್ತ್ರೀವಾದಿ ಚಿಂತಕರಾಗಿ, ಹೋರಾಟಗಾರರಾಗಿ, ಸಮಾಜ ವಿಜ್ಞಾನಿಯಾಗಿ, ಕಾರ್ಮಿಕ ಚರಿತ್ರಕಾರರಾಗಿ–ಹೀಗೆ ಬಹುಮುಖ ವ್ಯಕ್ತಿತ್ವದ ಮಹಿಳೆ. ವಿದ್ವತ್ತಿನ ಕ್ಷೇತ್ರದಲ್ಲೂ, ರಾಜಕೀಯ ಕ್ಷೇತ್ರದಲ್ಲೂ ಕುಮಾರಿಯವರ ಕಾರ್ಯಗಳು ಕಳೆದ ಹಲವು ದಶಕಗಳಿಂದಲೂ ದಕ್ಷಿಣಏಷ್ಯಾದ ಹಲವು ಪೀಳಿಗೆಗಳ ಸ್ತ್ರೀವಾದಿ ಚಿಂತಕರು ಹಾಗೂ ಹೋರಾಟಗಾರರಿಗೆ ಪ್ರೇರಣೆ ನೀಡುತ್ತಾ ಬಂದಿವೆ.

ಸುಮಾರು 25 ವರ್ಷಗಳಿಂದ ಶ್ರೀಲಂಕಾದ ರಾಜಕೀಯ ಆಗುಹೋಗುಗಳಲ್ಲಿ ತಮ್ಮನ್ನು ಗಾಢವಾಗಿ ತೊಡಗಿಸಿಕೊಂಡಿರುವ ಕುಮಾರಿಯವರ ಬದುಕು–ಬರಹಗಳು ಅವರ ಅಸಾಧಾರಣ ಧೈರ್ಯ, ಧ್ಯೇಯವಾದಿತ್ವಗಳ ಸಂಕೇತದಂತಿವೆ. ಸ್ತ್ರೀವಾದ, ಸಮಾಜವಾದ, ಜನಾಂಗ ಸಾಮರಸ್ಯ, ಜನಾಂಗ ಘರ್ಷಣೆಯ ಪರಿಹಾರ ಹಾಗೂ ಶಾಂತಿ ಸ್ಥಾಪನೆಯ ಯತ್ನಗಳೇ ಅವರ ಉಸಿರಾಗಿವೆ. ಮಾನವ ಹಕ್ಕುಗಳು, ಜನತಾಂತ್ರಿಕತೆ, ಜನಾಂಗವಾದದ ವಿರೋಧ ಹಾಗೂ ಅಲ್ಪಸಂಖ್ಯಾತರ ಹಕ್ಕುಗಳ ಪರವಾಗಿರುವ ಕುಮಾರಿಯವರು ಎಂದೂ ರಾಜಿಯಾಗದ ಸ್ಪಷ್ಟ ರಾಜಕೀಯ ಬದ್ಧತೆಯುಳ್ಳವರು.

ಜಯವರ್ದನೆ ಅವರ ಸಂಶೋಧನೆ, ಚಿಂತನೆ ಹಾಗೂ ಬರಹಗಳೆಲ್ಲವೂ ಮುಖ್ಯವಾಗಿ ರಾಷ್ಟ್ರೀಯವಾದ, ಜನಾಂಗವಾದ, ಲಿಂಗತ್ವ ಮತ್ತು ವರ್ಗ ಸಮಸ್ಯೆಗಳಿಗೆ ಸಂಬಂಧಪಟ್ಟಿವೆ. ಅವರ ಹೋರಾಟ ಚಟುವಟಿಕೆಗಳು ಮತ್ತು ಸಭೆ, ಸಮಾವೇಶಗಳು



# ಕ್ರಾಂತಿಕಾರಕ ಹೋರಾಟ, ವಿದ್ವತ್ತುಗಳ ಅಪರೂಪದ ಸಂಗಮ: ಡಾ. ಕುಮಾರಿ ಜಯವರ್ದನಾ

■ *ಡಾ॥ ಬಿ.ಎನ್. ಸುಮಿತ್ರಾಬಾಯಿ*

ಶ್ರೀಲಂಕಾದಲ್ಲಿ ಅನೇಕ ಸಂಶೋಧನಾ ಸಂಸ್ಥೆಗಳ, ಸಂಘಟನೆಗಳ ಸ್ಥಾಪನೆ, ಅಧ್ಯಯನ, ಗ್ರಂಥ ಪ್ರಕಟಣೆ ಹಾಗೂ ತೌಲನಿಕ ಅಧ್ಯಯನಗಳಿಗೆ ಹಾದಿ ನಿರ್ಮಿಸಿವೆ. ಒಬ್ಬ ಅಂತಾರಾಷ್ಟ್ರೀಯ ಮಟ್ಟದ ವಿದುಷಿ ಆಗಿದ್ದರೂ ಕುಮಾರಿಯವರ ಮೂಲ ಒಲವು ದಕ್ಷಿಣಏಷ್ಯಾ. ಈ ಭೂಭಾಗದ ಅನೇಕ ಸ್ತ್ರೀವಾದಿಗಳು ಇವರನ್ನು ಈ ಪ್ರದೇಶದ ಪ್ರಥಮ ಸ್ತ್ರೀವಾದಿ ಚಿಂತಕಿ ಎಂದೇ ಗೌರವಿಸುತ್ತಾರೆ.

ಕುಮಾರಿ ಜಯವರ್ದನೆ ಅವರು ಜನಿಸಿದ್ದು 1931ರಲ್ಲಿ. ತಂದೆ ಡಾ. ಎ.ಪಿ. ಡಿಸೋಜ಼ಾ ಸಿಂಹಳೀಯ, ರಾಜಕೀಯ ನಾಯಕ ಹಾಗೂ ಲೇಖಕರು. ತಾಯಿ ಎಲಿನಾರ್ ಹಟ್ಟನ್ ಒಬ್ಬ ಬ್ರಿಟಿಷ್ ಮಹಿಳೆ. ಈ ಅಪರೂಪದ ದಂಪತಿಗಳ ಮಗಳಾದ ಕುಮಾರಿಯವರ ಬಾಲ್ಯವೆಲ್ಲ ತುಂಬ ವರ್ಣಮಯ ಘಟನೆಗಳಿಂದ ಸಮೃದ್ಧವಾದದ್ದಾಗಿತ್ತು. ಪೂರ್ವ–ಪಶ್ಚಿಮಗಳೆರಡರ ಸಾಂಸ್ಕೃತಿಕ ಉತ್ತಮಾಂಶಗಳೆಲ್ಲವನ್ನೂ ಹೀರಿಕೊಂಡು ಅವರು ಬೆಳೆದರೆನ್ನಬಹುದು. ತಂದೆ ಸ್ಟೇಟ್ ಕೌನ್ಸಿಲ್‌ನ ರಾಜಕಾರಣಿ ಯಷ್ಟೇ ಅಲ್ಲದೆ ಬೌದ್ಧಧರ್ಮದ ದೊಡ್ಡ ವಿದ್ವಾಂಸರೂ ಹೌದು. ತಾಯಿ ಚಿತ್ರಕಲೆ, ಸಂಗೀತ ಹಾಗೂ ಮಹಿಳಾ ಹಕ್ಕುಗಳ ಅರಿವನ್ನು ಮಗಳಲ್ಲಿ ಬೆಳೆಸಿದ್ದರು. ಶ್ರೀಲಂಕೆಯ ರಾಜ್ಯಪರಿಷತ್ತಿನಲ್ಲಿ ಆ ದೇಶದಾದ್ಯಂತ ವರದಕ್ಷಿಣೆ ಪದ್ಧತಿಯು ರದ್ದಾಗಬೇಕೆಂಬ ನಿರ್ಣಯವನ್ನು ಮೊದಲ ಬಾರಿಗೆ ಮುಂದಿಟ್ಟ ಮುಖಂಡರು ಕುಮಾರಿಯವರ ತಂದೆಯೇ. ಶ್ರೀಲಂಕಾ ಮಹಿಳಾ ಸಂಘಟನೆಯ ಸಕ್ರಿಯ ಸದಸ್ಯೆಯಾಗಿದ್ದ ತಾಯಿ ಅನೇಕ ಅಂತಾರಾಷ್ಟ್ರೀಯ ಥಿಯಾಸಫಿಕಲ್ ಮಹಿಳಾ ಸಮ್ಮೇಳನಗಳಲ್ಲಿ ಭಾಗವಹಿಸಿದವರು. ಹೀಗೆ ಇವರಿಬ್ಬರ ಸತ್ವ, ಪ್ರೀತಿ, ಪ್ರೋತ್ಸಾಹಗಳನ್ನು ಹೀರಿಕೊಳ್ಳುತ್ತ, ಚಿಕ್ಕ ವಯಸ್ಸಿನಲ್ಲೇ ವಿಸ್ತಾರವಾಗಿ ಓದಿಕೊಂಡ ಕುಮಾರಿ ಆ ಕಾಲದ ಶ್ರೀಲಂಕೆಯ ಹುಡುಗಿಯರಂತೆ ಬಟ್ಟೆ ಹೊಲೆಯುತ್ತಾ, ಕಸೂತಿ ಹಾಕುತ್ತಾ ಮನೆಯಲ್ಲಿ ಉಳಿಯುವವರಾಗಲಿಲ್ಲ. ಮನೆಯ ಹೊರಗಿನ ಸಮಾಜವೇ ಅವರ ಮುಖ್ಯ ಆಸಕ್ತಿಯಾಯಿತು.

ಮೊದಲ ಹಂತದ ಶಿಕ್ಷಣವನ್ನು ಕೊಲಂಬೋದಲ್ಲಿ ಪೂರೈಸಿದ ಕುಮಾರಿ, 1952ರಲ್ಲಿ London School of Economicsನಲ್ಲಿ ಪದವಿಗಾಗಿ ಪ್ರವೇಶ ಪಡೆದರು. ಅಲ್ಲಿ ಅರ್ಥಶಾಸ್ತ್ರದಲ್ಲಿ ಬಿ.ಎಸ್‌ಸಿ ಪದವಿಯನ್ನು 1955ರಲ್ಲಿ ಪಡೆದರು. ಲಂಡನ್‌ನ Lincon's Inn ವಿದ್ಯಾಸಂಸ್ಥೆಯಿಂದ 1958ರಲ್ಲಿ ಬಾರ್ ಅಟ್ ಲಾ ಪದವಿ ಮತ್ತು 1964ರಲ್ಲಿ ಕೈಗಾರಿಕಾ ಸಂಬಂಧಗಳ ಬಗ್ಗೆ ನಡೆಸಿದ ಸಂಶೋಧನೆಗಾಗಿ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಿಂದ ಅವರಿಗೆ ಪಿಎಚ್.ಡಿ ಪದವಿ ದೊರೆಯಿತು. ಪ್ಯಾರಿಸ್‌ನಲ್ಲಿರುವ Institut d'etudesನಿಂದ ಸರ್ಟಿಫಿಕೇಟ್ 1976ರಲ್ಲಿ ದೊರಕಿಸಿಕೊಂಡರು. ರಾಜ್ಯಶಾಸ್ತ್ರದ ಈ ಪದವಿ ಮೂಲಕ ಕೊಲಂಬೋ ವಿಶ್ವವಿದ್ಯಾಲಯದಲ್ಲಿ 1969ರಿಂದ 1985ರವರೆಗೂ ಕುಮಾರಿಯವರು ರಾಜ್ಯಶಾಸ್ತ್ರದ ಪ್ರಾಧ್ಯಾಪಕಿಯಾಗಿ ವೃತ್ತಿ ನಿರ್ವಹಿಸಿದರು. ಅಲ್ಲಿ ಒಬ್ಬ ಅಸೋಸಿಯೇಟ್ ಪ್ರೊಫೆಸರ್ ಆಗಿ ನಿವೃತ್ತರಾದರು. ನೆದರ್‌ಲ್ಯಾಂಡ್‌ನ ಹೇಗ್‌ನಲ್ಲಿರುವ Institute of Social Studiesನಲ್ಲಿ 1980–82ರ ಅವಧಿಯಲ್ಲಿ ಮಹಿಳೆ ಮತ್ತು ಅಭಿವೃದ್ಧಿಯನ್ನು ಕುರಿತ ಎಂ.ಎ ತರಗತಿಗಳಿಗೆ ಸಂದರ್ಶಕ ಪ್ರಾಧ್ಯಾಪಕಿಯಾಗಿದ್ದರು. Radcliff Collegeನ Bunting Instituteನಲ್ಲಿ ಒಬ್ಬ ಫೆಲೋ ಆಗಿದ್ದರು. ಇದೀಗ ಕೊಲಂಬೋ ವಿಶ್ವವಿದ್ಯಾಲಯದ ಮಹಿಳಾ ಅಧ್ಯಯನಗಳ ಸ್ನಾತಕೋತ್ತರ ಶಿಕ್ಷಣದ ಕ್ಷೇತ್ರದಲ್ಲಿ ಅಧ್ಯಾಪಕಿಯಾಗಿದ್ದಾರೆ.

1952ರಲ್ಲಿ ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಓದಲಾರಂಭಿಸಿದ ಕಾಲದಲ್ಲಿ ಅವರಷ್ಟೇ ಪ್ರತಿಭಾವಂತ ಗೆಳೆಯ ಸೂರ್ಯ ವಿಕ್ರಮಸಿಂಘೆ, ರಾಲ್ಫ್ ಮಿಲಿಬಂಡ್‌ರಂಥ ರಾಜಕೀಯಾರ್ಥಶಾಸ್ತ್ರಜ್ಞ ಶಿಕ್ಷಕರು ಮೊದಲಾದವರ ಪರಿಚಯ ಹಾಗೂ ಸಹವಾಸಗಳಲ್ಲಿ ಕುಮಾರಿ ಅವರ ಜೀವನ ತುಂಬ ಮಹತ್ವದ ಘಟನಾವಳಿಗಳಿಂದ ಕೂಡಿದ್ದುದಾಗಿತ್ತು. ಲಂಡನ್‌ನಲ್ಲಿ ಆ ಕಾಲದಲ್ಲಿ ಇವರಂತೆಯೇ ಓದುತ್ತಿದ್ದ ಇತರ ಸಿಂಹಳೀಯರ ಹಾಗೆ ಈಕೆಯೂ ಜಗತ್ತನ್ನು ಪರಿವರ್ತಿಸಬಲ್ಲ, ದೇಶದ ಸ್ವಾತಂತ್ರ್ಯಕ್ಕೆ ಇಂಬುಕೊಡಬಲ್ಲ ಕ್ರಾಂತಿತತ್ವಗಳಲ್ಲಿ ಆಳವಾದ ನಂಬಿಕೆಯನ್ನು ತಳೆದಂಥ ಕಾಲ ಅದು. ತೃತೀಯ ಜಗತ್ತಿನ

ಬುದ್ಧಿಜೀವಿಗಳೆಂದು ಮುಂದೆ ಪ್ರಖ್ಯಾತರಾದ ಅನೇಕರ ಪರಿಚಯ ಆಗಲೇ ಆದದ್ದು, ಬದುಕಿಡೀ ಮುಂದುವರೆಯಿತು. ಅವರ ಭಾವಿ ಜೀವನಸಂಗಾತಿಯಾಗಲಿದ್ದ ಲಾಲ್(ಜಯವರ್ದನೆ) ಅವರನ್ನು ಕುಮಾರಿ ಸಂಧಿಸಿದ್ದೂ ಅಲ್ಲಿಯೇ. ಇವರಿಬ್ಬರ ಅನೇಕ ಆಸಕ್ತಿಗಳು ಒಂದೇ ಆಗಿದ್ದು ಲಾಲ್ ಅವರ ಉದಾರ ಚೈತನ್ಯದ ನೆರವಿನಿಂದ ಕುಮಾರಿ ಮುಂದಿನ ಅನೇಕ ಸಾಧನೆಗಳನ್ನು ಮಾಡುವುದು ಸಾಧ್ಯವಾಯಿತು.

ಒಬ್ಬ ಕ್ರಾಂತಿಕಾರಿ ಹೋರಾಟಗಾರರಾಗಿ ಕುಮಾರಿ ಅವರು ಶ್ರೀಲಂಕಾದ ರಾಜಕೀಯದೊಂದಿಗೂ ಅಲ್ಲಿನ ಸಾಮಾಜಿಕ ಚಳವಳಿಗಳೊಂದಿಗೂ ಯಾವಾಗಲೂ ಆಳವಾಗಿ ತೊಡಗಿಕೊಂಡಿದ್ದಾರೆ. ದಕ್ಷಿಣ ಏಷ್ಯಾದ ಬೆಳವಣಿಗೆಗಳಲ್ಲಿ ಅವರು ಗಳಿಸಿಕೊಂಡ ತಾತ್ವಿಕದರ್ಶನದಿಂದಾಗಿ ನೆರೆಹೊರೆಯ ಹಾಗೂ ತೃತೀಯ ಜಗತ್ತಿನ ಜನರೊಂದಿಗೆ ಸಮಾನ ಸಮಸ್ಯೆಗಳನ್ನು ಗುರುತಿಸಿ, ಅವರ ಹೋರಾಟ ಹಾಗೂ ಸಾಧನೆಗಳೊಂದಿಗೆ ಕೈಜೋಡಿಸಿದ್ದಾರೆ. ಶ್ರೀಲಂಕೆಯಲ್ಲಿ ನಡೆದ ಅಸಂಖ್ಯಾತ ಪ್ರತಿಭಟನೆಗಳು ರ್‍ಯಾಲಿಗಳಲ್ಲಿ ಪಾಲ್ಗೊಳ್ಳುವ ಈ ಕ್ರಿಯಾಶೀಲೆ ದೇಶ–ವಿದೇಶಗಳ ಲೆಕ್ಕವಿಲ್ಲದಷ್ಟು ವಿದ್ವಾಂಸರಿಗೆ, ಯುವ ಸಂಶೋಧಕರಿಗೆ ಹಾಗೂ ರಾಜಕೀಯ ಕಾರ್ಯಕರ್ತರಿಗೆ ಅವರಿಗೆ ಅಗತ್ಯವಿರುವ ಎಲ್ಲ ವಿಷಯಗಳಲ್ಲಿ ಮಾರ್ಗದರ್ಶಕರೂ ಆಗಿದ್ದಾರೆ. ಸರ್ಕಾರದ ವಿಷಯದಲ್ಲಿ ಸಾಮಾನ್ಯವಾಗಿ ಅವಿಶ್ವಾಸದ ತಟಸ್ಥನಿಲುವುಳ್ಳವರಾದರೂ ಲಿಂಗತ್ವ, ಶಾಂತಿ, ಅಲ್ಪಸಂಖ್ಯಾತರ ಹಕ್ಕು, ಜನತಾಂತ್ರಿಕತೆಯ ಸಂಬಂಧದಲ್ಲಿ ಅವಶ್ಯಕವಾದಾಗ ನಡುವೆ ಪ್ರವೇಶಿಸಿ ಸಮಸ್ಯೆ ಪರಿಹರಿಸಲು ತಮ್ಮ ಕೈಲಾಗುವ ಎಲ್ಲ ಪ್ರಯತ್ನ ಮಾಡುತ್ತಾರೆ.

ಕೊಲಂಬೋದಲ್ಲಿ ಲಿಂಗತ್ವ ಪ್ರಶ್ನೆಯ ಪರಿಹಾರಕ್ಕಾಗಿ ಅಸ್ತಿತ್ವದಲ್ಲಿದ್ದ ಉಪಸಮಿತಿಯ ಅಧ್ಯಕ್ಷರಾಗಿದ್ದಾಗ 'Women`s Manifesto' ಒಂದನ್ನು ತಮ್ಮ ಜೊತೆಯ ಸ್ತ್ರೀವಾದಿಗಳ ನೆರವಿನಿಂದ ಸಿದ್ಧಪಡಿಸಿ, ಈ ಪ್ರಣಾಳಿಕೆಯ ಪ್ರತಿಗಳನ್ನು ಪಾರ್ಲಿಮೆಂಟರಿ ಚುನಾವಣೆ ಸಂಬಂಧದಲ್ಲಿ ಚುನಾವಣೆಯ ಅಭ್ಯರ್ಥಿಗಳಿಗೂ ಮತದಾರರಿಗೂ ಹಂಚಿದ್ದರು. ಅಭ್ಯರ್ಥಿಗಳಿಗೆ ಲಿಂಗತ್ವ–ಸಮಾನತೆಯುಳ್ಳ ಸಮಾಜವನ್ನು ಕಟ್ಟುವ ಯೋಜನೆಗಳನ್ನು ಕೈಗೊಳ್ಳುವಂತೆ ಕರೆ ನೀಡುವುದು ಮತ್ತು ಮತದಾರರಿಗೆ ಅಂಥ ಅರ್ಹವ್ಯಕ್ತಿಗಳನ್ನೇ ಚುನಾಯಿಸಲು ಪ್ರೇರಿಸುವುದು ಅವರ ಉದ್ದೇಶವಾಗಿತ್ತು. ಆ ಪ್ರಣಾಳಿಕೆಯೇ ಈಗ ಲಿಂಗತ್ವ–ಸಂವೇದನೆ ಬೆಳೆಸಲಿಕ್ಕಾಗಿ ನಡೆಸುವ ಎಲ್ಲಾ ಕಾರ್ಯಾಗಾರಗಳಲ್ಲಿ, ತರಬೇತಿ ಕಾರ್ಯಕ್ರಮಗಳಲ್ಲಿ ವಿದ್ವತ್ತಿನ ವಲಯಗಳಲ್ಲೂ ಪ್ರಜ್ಞಾಜಾಗೃತಿ ಸಾಧನವಾಗಿ ಬಳಕೆಯಾಗುತ್ತಾ ಬಂದಿದೆ.

1972ರಲ್ಲಿ ಕುಮಾರಿ ಅವರು ರಚಿಸಿದ The Rise of Labour Movement in Ceylon ಮತ್ತು 1986ರಲ್ಲಿ ಬರೆದ Feminism and Nationalism in the Third world - ಎಂಬ ಎರಡು ಆರಂಭಕಾಲದ ಮಹತ್ವದ ಕೃತಿಗಳಿಂದ ಇವರ ಹೆಸರು ವಿಶ್ವದಾದ್ಯಂತ ಚಳಿವಳಿಗಾರರ, ವಿದ್ವಾಂಸರ ಗಮನಕ್ಕೆ ಬರುವಂತಾಯ್ತು.

Feminism and Nationalism in the Third world- ಎಂಬ ಗ್ರಂಥದಲ್ಲಿ ಅವರು ಇಪ್ಪತ್ತನೆಯ ಶತಮಾನದ ಆರಂಭದ ರಾಷ್ಟ್ರೀಯವಾದಿಗಳು ಇಂಡಿಯಾ, ಈಜಿಪ್ಟ್ ಅಥವಾ ಶ್ರೀಲಂಕಾ ಎಲ್ಲೇ ಇರಲಿ ಅವರೆಲ್ಲರೂ ಮಹಿಳೆಯರ ಹಕ್ಕುಗಳಿಗಾಗಿ ಹೋರಾಡಿದ ಮುಂದಾಳುಗಳೇ ಆಗಿದ್ದಾರೆ. ದೇಶಕ್ಕೆ ಸ್ವಾತಂತ್ರ್ಯ ಗಳಿಸುವುದರ ಮೂಲಕ ಮಹಿಳೆಯರ ಹಕ್ಕೂ ಸಾಧಿಸಲ್ಪಡಬಹುದು ಎಂಬ ನೋಟ ಅವರಿಗಿತ್ತು, ಆದ್ದರಿಂದಲೇ ತೃತೀಯ ಜಗತ್ತಿನಲ್ಲಿ ಸ್ತ್ರೀವಾದವು ಕಾಣಿಸಿಕೊಂಡಿದ್ದು ಕೇವಲ ಪಾಶ್ಚಾತ್ಯರಿಂದ ಆಮದಾದ ವಿಚಾರಧಾರೆಯಾಗಿ ಅಲ್ಲ; ವಸಾಹತೋತ್ತರ ಕಾಲದಲ್ಲಿ ಸ್ವತಂತ್ರವಾಗಿ ಹೊಮ್ಮಿಬಂದ ದೇಶಗಳು ಆಧುನೀಕರಣಕ್ಕೆ ಪ್ರತಿಸ್ಪಂದಿಸಿದ ರೀತಿಯಲ್ಲಿಯೇ ಈ ದೇಶಗಳ ಸ್ತ್ರೀವಾದದ ಸ್ಪಷ್ಟಮೂಲವಿದೆ ಎಂಬುದನ್ನು ಕುಮಾರಿ ಸಾಧಾರವಾಗಿ ತೋರಿಸಿಕೊಟ್ಟರು. ತೃತೀಯ ಜಗತ್ತಿನ ಸ್ತ್ರೀವಾದ ಬಹುಮುಖ ರೂಪವುಳ್ಳದ್ದು ಎಂದೂ, ಅದಕ್ಕೆ ಆಯಾ ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ವೈಲಕ್ಷಣ್ಯಗಳೇ ಕಾರಣವೆಂದೂ, ಈ ರೀತಿ ತೃತೀಯ ಜಗತ್ತಿನ ಸ್ತ್ರೀವಾದಿಗಳು ಪಶ್ಚಿಮದ ಸ್ತ್ರೀವಾದಕ್ಕಿಂತ ವಿಭಿನ್ನವಾದವುಗಳೆಂದೂ ಅವರು ಪ್ರತಿಪಾದಿಸಿದರು. ಇದರಿಂದ ತೃತೀಯ ಜಗತ್ತಿನ ಸ್ತ್ರೀವಾದವನ್ನು ಅರ್ಥಮಾಡಿಕೊಳ್ಳಲು ಒಂದು ಸ್ಪಷ್ಟವಾದ ತಾತ್ವಿಕ ಚೌಕಟ್ಟನ್ನು ಒದಗಿಸಿಕೊಟ್ಟರು. 1986ರಲ್ಲಿ ಪ್ರಕಟವಾದ ಈ ಕೃತಿಯು ಅದೇ ವರ್ಷ ಇಂಗ್ಲೆಂಡಿನ 'Feminist Fortnight' ಪ್ರಶಸ್ತಿಗೆ ಆಯ್ಕೆಯಾಯಿತು. ಹಾಗೂ ಅಮೆರಿಕಾದ ಪತ್ರಿಕೆ 1970ರಿಂದ 1990ರ ನಡುವಿನ ಅವಧಿಯಲ್ಲಿ ಪ್ರಕಟವಾದ ಇಪ್ಪತ್ತು ಮಹತ್ವಪೂರ್ಣ ಗ್ರಂಥಗಳಲ್ಲಿ ಈ ಗ್ರಂಥವೂ ಒಂದು ಎಂದು ದಾಖಲಿಸಿತು. ಅಂದಿನಿಂದ ಇಂದಿನವರೆಗೆ ಜಗತ್ತಿನಾದ್ಯಂತ ಎಲ್ಲ ವಿಶ್ವವಿದ್ಯಾಲಯಗಳ ಮಹಿಳಾ ಅಧ್ಯಯನಗಳಲ್ಲಿ ಈ ಗ್ರಂಥದ ಓದು, ಪರಾಮರ್ಶೆಗಳು ಕಡ್ಡಾಯವಾಗಿ ಸೇರಿಹೋಗಿವೆ.

ರಾಷ್ಟ್ರೀಯವಾದಿಗಳ ಪ್ರಗತಿಪರ ಉದಾರತಾವಾದಿ ಧೋರಣೆಗಳು, ಆಯಾ ದೇಶಕ್ಕೆ ಸ್ವಾತಂತ್ರ್ಯ ಬಂದಮೇಲೆ ಹಾಗೆಯೇ ಮುಂದುವರೆಯಲಿಲ್ಲ. ರಾಷ್ಟ್ರೀಯವಾದ, ದೇಶಪ್ರೇಮಗಳಿಗೆ ತೀರ ಬೇರೆಯದೇ ಬಣ್ಣ ಬಂದಿತು. ಸಿಂಹಳೀಯರು–ತಮಿಳರ ನಡುವೆ ಹುಟ್ಟಿಕೊಂಡ ಜನಾಂಗವಾದಿ ವೈಷಮ್ಯಗಳಿಂದಾಗಿ ಶ್ರೀಲಂಕಾ ಭಾರತಗಳ ನಡುವೆ ಅಂತರಗಳು ಏರ್ಪಟ್ಟವು. ತಮ್ಮ ನಾಡಿನ ಹೃದಯವನ್ನು ಬಗೆದಂಥ ಈ ದುರಂತದ ಬೆಳವಣಿಗೆ ಕುಮಾರಿಯವರನ್ನು ಬಲವಾಗಿ ಕಲಕಿತು. ಈ ಗಾಢಭಾವದ ಮೂಲಕವಾಗಿ ಹುಟ್ಟಿದ ಅತ್ಯಂತ ಸೃಜನಶೀಲ ಕೃತಿ Ethnic and Class Conflict ಎಂಬುದನ್ನು ಅವರು 1980ರಲ್ಲಿ ಪ್ರಕಟಿಸಿದರು. ಜನಾಂಗವಾದ ಮತ್ತು ವರ್ಗ ಸಂಘರ್ಷದ ಎರಡು ಘಟಕಗಳು ಶ್ರೀಲಂಕೆಯ ಎಡಪಂಥೀಯ ಚಳವಳಿಯಲ್ಲಿ ಸಮಾಜವನ್ನು ಕತ್ತರಿಸುವ ಆಟವನ್ನು ಹೇಗೆ ಆಡುತ್ತಿವೆ ಎಂಬುದನ್ನು ಮನಮುಟ್ಟುವಂತೆ ಕುಮಾರಿಯವರು ಈ ಗ್ರಂಥದಲ್ಲಿ ವಿಶ್ಲೇಷಿಸಿದ್ದಾರೆ.

1998ರಲ್ಲಿ ಕುಮಾರಿ ಜಯವರ್ದನೆ ರಚಿಸಿದ ಮತ್ತೊಂದು ಮಹತ್ವಪೂರ್ಣ ಗ್ರಂಥ 'The white woman's other Burden'. ಅದರಲ್ಲಿ ಅವರು ವಸಾಹತುಶಾಹಿಗೆ ಒಳಪಟ್ಟ ದೇಶಗಳಲ್ಲಿ ಐರೋಪ್ಯ ಹಾಗೂ ಅಮೆರಿಕನ್ ಮಹಿಳೆಯರು ನಿರ್ವಹಿಸಿರುವ ಚಾರಿತ್ರಿಕ ಪಾತ್ರವನ್ನು, ಅವರ ಇತಿಹಾಸವನ್ನು ಪುನಾರಚಿಸಲು ಯತ್ನಿಸಿದ್ದಾರೆ. "ಮೂಲನಿವಾಸಿಗಳ ನಾಗರೀಕರಣ"ಕ್ಕಾಗಿ ವಸಾಹತು ಆಳುವ ವರ್ಗ ಚಿಂತಿಸುತ್ತಿರುವಾಗ ಅನೇಕಾನೇಕ ಬಿಳಿಯ ಮಹಿಳೆಯರು ಆ ಚಿಂತನೆಯೊಂದಿಗೆ ಕೈಜೋಡಿಸಲಿಲ್ಲ; ಬದಲಾಗಿ ಪಿತೃಪ್ರಾಧಾನ್ಯಕ್ಕೆ ಸವಾಲೊಡ್ಡುವ ರೀತಿಯಲ್ಲಿ ಪ್ರಜ್ಞಾಪೂರ್ವಕವಾಗಿ ಸ್ತ್ರೀಯರ ಪ್ರಗತಿಯ ಕಾರ್ಯಗಳಲ್ಲಿ ಆ ಮಹಿಳೆಯರು ತೊಡಗಿಕೊಂಡಿದ್ದರು. ಅವರಲ್ಲಿ ಅನೇಕರು ಸ್ಥಳೀಯ ಸೋಷಲಿಸ್ಟ್ ಹಾಗೂ ನ್ಯಾಷನಲಿಸ್ಟ್ ಪಕ್ಷಗಳನ್ನು ಕಟ್ಟುವಲ್ಲಿ ಮುಂದಾಳ್ತನವನ್ನೂ ವಹಿಸಿದ್ದರೆಂಬುದನ್ನು ಕುಮಾರಿ ಗುರುತಿಸುತ್ತಾರೆ.

2000ದ ಇಸವಿಯಲ್ಲಿ ಕುಮಾರಿಯವರು ಪ್ರಕಟಿಸಿದ ಮುಖ್ಯವಾದ ಇನ್ನೊಂದು ಕೃತಿ From Nobodies to Somebodies -The Rise of the Colonial Bourgeoisie in Srilanka ಎಂಬುದು. ಒಂದು ವಸಾಹತು ಸಮಾಜದಲ್ಲಿ ಬಂಡವಾಳ ಶೇಖರಣೆ, ವರ್ಗ ನಿರ್ಮಾಣ ಹಾಗೂ ಸಾಮಾಜಿಕ ಪರಿವರ್ತನೆಗಳು ಆಗುವ ಬಗೆಯನ್ನು

ಶ್ರೀಲಂಕಾದ ಮಾದರಿಯ ಮೂಲಕ ಚರ್ಚಿಸಿರುವ ಈ ಗ್ರಂಥ ಸಾಂಪ್ರದಾಯಿಕ ಚಿಂತನೆಯ ಗಡಿಯನ್ನು ದಾಟಿ ಹೊಸ ವಿಚಾರಕ್ಕೆ ಪ್ರೇರಣೆ ನೀಡುವುದೆಂದು ಕೊಂಡಾಡಲ್ಪಟ್ಟಿದೆ.

ಡಾ॥ ಕುಮಾರಿಯವರ ಇತ್ತೀಚಿನ ಗಮನಾರ್ಹ ಗ್ರಂಥವೆಂದರೆ 'The Erasure of the Eurasian' ಎಂಬುದು. ಜನಾಂಗ ವಾದವನ್ನು ಬಲವಾಗಿ ಖಂಡಿಸುವ ಲೇಖಕಿಯ ಅಚಲ ನಂಬಿಕೆಯ ಪ್ರತೀಕ ಇದಾಗಿದೆ. Eurasian ಅಥವಾ ಹೈಬ್ರಿಡ್ ಜನಾಂಗವು ಪ್ರಪಂಚದಲ್ಲಿ ಒಂದು ವಿಶಿಷ್ಟ ಜಾಗ ಹೊಂದಿದೆ ಎಂದು ಅವರು ಗುರುತಿಸುತ್ತಾರೆ. ತಮ್ಮ ಮೂಲದ ಐರೋಪ್ಯ ಪೂರ್ವಜರು ತಮ್ಮ ಬಗ್ಗೆ ತೋರಿಸಿದ ತಿರಸ್ಕಾರದಿಂದ ಪ್ರಚೋದನೆಗೊಂಡ ಅನೇಕ ಯುರೇಷಿಯನ್ನರು ತಮ್ಮ ದೇಶಗಳ ರಾಷ್ಟ್ರೀಯವಾದಿಗಳ ಮೂಲ ಮಾದರಿಗಳಾಗಿ ಬಲವಾಗಿ ದೇಶದ ಸ್ವಾತಂತ್ರ್ಯದ ಪರ ವಾದ ಹೂಡಿದರು. ಅದೇ ಹೊತ್ತಿನಲ್ಲೇ ಸ್ಥಳೀಯವಾದ ಇತರ ಸಮುದಾಯ ಗಳಲ್ಲಿನ ಊಳಿಗಮಾನ್ಯ ವ್ಯವಸ್ಥೆ, ತಾರತಮ್ಯ ಸಂಪ್ರದಾಯದಿಂದ ಪ್ರೇರಿತವಾದ ನಂಬಿಕೆ, ಆಚರಣೆಗಳ ಬಗ್ಗೆ ಬಲವಾದ ಅಪನಂಬಿಕೆಯನ್ನೂ ಅವರು ಬೆಳೆಸಿಕೊಂಡಿದ್ದರು. ಈ ರೀತಿ ಯೂರೋಪಿಯನ್ನರ ವ್ಯಕ್ತಿತ್ವಗಳು ಸಂಪ್ರದಾಯ ಮತ್ತು ಆಧುನಿಕತೆಯ ಬಿಗಿತಗಳಿಂದ ಮೈತಳೆದಿದ್ದವು. ಅವರ ಅಂದಿನ ಬರಹಗಳು, ಸಂದರ್ಶನಗಳನ್ನು ನೋಡಿದರೆ ಬಹುಶಃ ಅವರ ಭವಿಷ್ಯದ ಕಾಲದವರಾದ ನಾವು ಪಾಶ್ಚಾತ್ಯರೊಂದಿಗೆ ಹೇಗೆ ನಡೆದುಕೊಳ್ಳುತ್ತೇವೆ, ನಮ್ಮವರೊಂದಿಗೇ ಹೇಗೆ ವ್ಯವಹರಿಸುತ್ತೇವೆ ಎಂಬುದಕ್ಕೆ ಅವು ದಿಕ್ಸೂಚಿಗಳಾಗಿರ ಬಹುದು ಎಂದು ಕುಮಾರಿ ಸೂಚಿಸುತ್ತಾರೆ. 'ಯುರೇಷಿಯನ್ ಎಂಬುದು ಬರೀ ಹುಟ್ಟಿನಿಂದ ಸಂಭವಿಸುವ ಜನಾಂಗೀಯ ನೆಲೆ ಅಲ್ಲ' ಎನ್ನುವ ಕುಮಾರಿಯವರ ವಿಚಾರವು ಬಹುಶಃ ಪಶ್ಚಿಮ ದೇಶಗಳಲ್ಲೇ ಬಹುಕಾಲ ನೆಲೆಸಿ, Enlightenmentನ ಮೌಲ್ಯಗಳಿಗೆ ತೆರೆದುಕೊಂಡಿದ್ದರೂ ತಾಯ್ನಾಡಿನತ್ತ ಬಲವಾಗಿ ಸೆಳೆಯಲ್ಪಡುವವರಿಗೆ ಹೆಚ್ಚು ಅರ್ಥವತ್ತಾಗಿ ತೋರುವಂಥವು.



ಕೊಲಂಬೋ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕಿಯಾಗಿದ್ದಾಗಲೇ ಕುಮಾರಿಯವರು ತಮ್ಮ ಕೆಲವು ಸಹೋದ್ಯೋಗಿಗಳಾಗಿದ್ದ ಡಾ॥ ಲಕ್ಸಿರಿ ಜಯಸೂರ್ಯ (ಸಮಾಜಶಾಸ್ತ್ರ), ಚಂದ್ರದಾಸ, ಮುನಸಿಂಘೆ (ಅರ್ಥಶಾಸ್ತ್ರ) ಹಾಗೂ ಪ್ರೇಮದಾಸ ಉದಗಮ (ಶಿಕ್ಷಣ ಮಂತ್ರಾಲಯದ ಕಾರ್ಯದರ್ಶಿ) ಮೊದಲಾದವರ ಜೊತೆಗೂಡಿ ಆ ವಿಶ್ವವಿದ್ಯಾಲಯದ ಕಾರ್ಮಿಕರಿಗಾಗಿ ಶಿಕ್ಷಣ ಕೇಂದ್ರವೊಂದನ್ನು ಪ್ರಾರಂಭಿಸಿದರು. ಯುಗೋಸ್ಲಾವಿಯಾದಲ್ಲಿ ತಾವೆಲ್ಲ ಪಡೆದ ಅನುಭವದಿಂದ ಪ್ರೇರಿತರಾಗಿ ಪ್ರಾಯೋಗಿಕ ಯತ್ನವೆಂದು ಈ ಕೇಂದ್ರವನ್ನು ಅವರು ಸ್ಥಾಪಿಸಿದರಾದರೂ ಅದು ಕಾಲ ಪರೀಕ್ಷೆಯನ್ನು ಗೆದ್ದು ಇಂದಿಗೂ ಕ್ರಿಯಾಶೀಲವಾಗಿದೆ.

1970ರಲ್ಲಿ Social Scientists Association ಎಂಬ ಸಂಸ್ಥೆಯನ್ನು ಕುಮಾರಿಯವರು ಸ್ಥಾಪಿಸುವ ಮೂಲಕ ದೇಶದ ಶಾಂತಿ, ಜನತಾಂತ್ರಿಕತೆ, ಬಹುತ್ವವಾದ, ಲಿಂಗತ್ವ ಸಮಾನತೆ, ಜನಾಂಗೀಯ ಸಂಘರ್ಷ ನಿವಾರಣೆ, ಕಾರ್ಮಿಕತ ಹಾಗೂ ಮಾನವ ಹಕ್ಕುಗಳ ಕ್ಷೇತ್ರಗಳಲ್ಲಿ ಪರ್ಯಾಯ ಚಿಂತನೆಯ ರಾಜಕೀಯ ನಿರ್ಮಾಣಕ್ಕೆ ಯತ್ನಿಸಿದರು. ಈ ಸಂಘಟನೆಯು ಅನೇಕ ಅಂತರರಾಷ್ಟ್ರೀಯ ಸೆಮಿನಾರುಗಳು, ಸಮ್ಮೇಳನಗಳನ್ನು ನಡೆಸಿದೆ, ಅನೇಕ ಸಂಶೋಧನಾ ಬರಹಗಳನ್ನು ಪ್ರಕಟಿಸಿದೆ. ರಾಷ್ಟ್ರೀಯ ಭಾಷೆಯ ಮೂಲಕ ಶಾಂತಿ ಶಿಕ್ಷಣದ ಕಾರ್ಯಕ್ರಮವು ಈ ಸಂಸ್ಥೆಯ ಈಚಿನ ಹೊಸ ಆವಿಷ್ಕಾರ ಗಳಲ್ಲೊಂದು.

ವಿಶ್ವವಿದ್ಯಾಲಯದಲ್ಲಿದ್ದಾಗಲೇ 1978ರಲ್ಲಿ 'ಮಹಿಳಾ ಶಿಕ್ಷಣ ಕೇಂದ್ರ'ವೊಂದನ್ನು (WEC) ಕುಮಾರಿಯವರು ಸ್ಥಾಪಿಸಿದ್ದರು. ಅದು ಮುಂದೆ ವಿಸ್ತಾರಗೊಂಡು ಮಹಿಳಾ ಶಿಕ್ಷಣ ಮತ್ತು ಸಂಶೋಧನಾ ಕೇಂದ್ರ (WERC)ವಾಯಿತು. 1978ರಲ್ಲಿ ಕುಮಾರಿಯವರು ಮೊಟ್ಟಮೊದಲ ಮಹಿಳಾಪತ್ರಿಕೆಯನ್ನು ಪ್ರಾರಂಭಿಸಿದರು. ಅದು ಮಹಿಳೆಯರ ಹೋರಾಟದ ಚಟುವಟಿಕೆಗಳ ದಾಖಲೆಯಷ್ಟೇ ಆಗಿರದೆ, ಮಹಿಳೆಯರ ಪರಾಧೀನತೆ, ಶೋಷಣೆಗಳಂಥ ಸಮಸ್ಯೆಗಳ ಚರ್ಚಾ ವೇದಿಕೆಯಾಗಿ ಬೆಳೆದು, ಅಕಾಡೆಮಿಕ್ ಕಾಣಿಕೆಯನ್ನೂ ಸಲ್ಲಿಸುತ್ತ ಬಂದಿದೆ. ಈಗ ಶ್ರೀಲಂಕಾದ ರಾಷ್ಟ್ರಭಾಷೆಗಳಾದ ಸಿಂಹಳೀ, ತಮಿಳು, ಇಂಗ್ಲಿಷ್ – ಈ ಮೂರು ಭಾಷೆಗಳಲ್ಲೂ ಅದು ಹೊರಬರುತ್ತಿದೆ.

ಒಬ್ಬ ವಿದುಷಿಯಾಗಿ ಕುಮಾರಿಯವರು ಗಾಢವಾಗಿ ಪ್ರಭಾವಿತವಾಗಿದ್ದು ಮಾರ್ಕ್ಸ್ ವಾದ, ಸ್ತ್ರೀವಾದ ಮತ್ತು ರಾಷ್ಟ್ರೀಯವಾದ ಗಳಿಂದ. ಶ್ರೀಲಂಕಾದಲ್ಲಾದ ಕಾರ್ಮಿಕ ಚಳವಳಿಗಳನ್ನು ಕುರಿತ ಬರಹಗಳಿಂದಾಗಿ ಅವರು ಪ್ರಸಿದ್ಧಿಗೆ ಬಂದರೂ ಆಕೆಯ ಬಲವಾದ ಕ್ರಿಯಾಶೀಲ ಹಾದಿ ಸ್ತ್ರೀವಾದಿ ಒಲವುಳ್ಳದ್ದೇ ಆಗಿದೆ. 1989ರಲ್ಲಿ Economic and Political Review ಪತ್ರಿಕೆಗಾಗಿ ಗೋವಿಂದ ಕೇಳ್ಕರ್ ಅವರ ಜೊತೆಯಲ್ಲಿ ಕುಮಾರಿಯವರು ಬರೆದ ಒಂದು ಚಿಕ್ಕಲೇಖನ 'The Left and Feminism'. ಈ ಲೇಖನವು ಮಾರ್ಕ್ಸ್ ವಾದ ಮತ್ತು ಸ್ತ್ರೀವಾದಗಳನ್ನು ಕುರಿತಂತೆ ಕುಮಾರಿಯವರ ತಾತ್ವಿಕ ನಿಲುವನ್ನು ಖಚಿತ ಪಡಿಸುತ್ತದೆ. ಎಡರಂಗದಲ್ಲಿ ಮಹಿಳಾ ಪ್ರಶ್ನೆಯ ಬಗ್ಗೆ ಇರುವ ವಿಸ್ಮೃತಿಯನ್ನು ದುಃಖದಿಂದ ಗುರುತಿಸುತ್ತಾ, ವರ್ತಮಾನದಲ್ಲಿ ದುಡಿಮೆ ಹಾಗೂ ಕ್ರಾಂತಿಯ ಚಟುವಟಿಕೆಗಳ ಸಂಬಂಧದಲ್ಲಿ ಮಹಿಳಾ ಪ್ರಶ್ನೆಯನ್ನು ಒಳಗೊಳ್ಳುವ ವಿಷಯದಲ್ಲಿ ಕಾಣುವ ವೈಫಲ್ಯವನ್ನು ಅವರು ಸ್ಪಷ್ಟವಾಗಿ ತೋರಿಸಿ ಕೊಡುತ್ತಾರೆ. ಎಡರಂಗವು ದಶಕಗಳಿಂದ ಯಾವುದನ್ನು ತನ್ನ ಸೈದ್ಧಾಂತಿಕತೆಗೆ ತಳಹದಿಯಾಗಿ ಇಟ್ಟುಕೊಂಡಿದೆಯೋ ಅದೇ ಜನತಾಂತ್ರಿಕ ಹೋರಾಟದ ಒಂದು ಭಾಗವೇ ಮಹಿಳಾ ಚಳವಳಿ ಕೂಡ ಎಂಬುದರತ್ತ ಗಮನ ಸೆಳೆಯುತ್ತಾರೆ. ಹಾಗೆಯೇ ಎಲ್ಲ ಬಗೆಯ ಶೋಷಣೆ, ದಮನಗಳನ್ನು ನಿರ್ಮೂಲನಗೊಳಿಸಿ ಸಮಾನತೆಯ ಮೇಲೆ ನೆಲೆಗೊಳ್ಳಬಲ್ಲ ರೀತಿಯ ಪರಿವರ್ತನೆಗಾಗಿ ಹಕ್ಕೊತ್ತಾಯಿಸುತ್ತಾರೆ.

ತಮ್ಮ ತುಂಬು ಕ್ರಿಯಾಶೀಲ ಬದುಕಿನಲ್ಲಿ ಲೆಕ್ಕವಿಲ್ಲದಷ್ಟು ಜನರ ಸಂಕಟ, ಕಷ್ಟ, ಸಮಸ್ಯೆಗಳಿಗೆ ಮನಸ್ಸನ್ನೂ ಕಾಲವನ್ನೂ ಬೇಸರವಿಲ್ಲದೆ ನೀಡುತ್ತ, ಅವರ ಸಮಸ್ಯೆಗೆ ಅಗತ್ಯವಿರುವ ಸಹಾಯ, ಸಲಹೆ, ಪ್ರೋತ್ಸಾಹ, ಪೋಷಣೆಗಳನ್ನು ಒದಗಿಸುವ ಡಾ.ಕುಮಾರಿ ಜಯವರ್ಧನೆ, ಅವರು ತಮ್ಮೊಂದಿಗೆ ನಿಕಟತೆಗೆ ಬಂದ ಎಲ್ಲರಿಗೂ ಪ್ರೀತಿ, ವಿಶ್ವಾಸಗಳನ್ನು ವಿತರಿಸುವ ಮಹಾನ್ ಮಾನವತಾವಾದಿಯೂ ಹೌದು.

*(ಸಂಗ್ರಹ : ವಿವಿಧ ಮೂಲಗಳಿಂದ)*

# ಎರಡು ನಾಟಕಗಳ ಸುತ್ತಲಿನ ಮನೆ, ರೊಟ್ಟಿ...

● ಡಾ. ಎಚ್.ಎಲ್. ಪುಷ್ಪ

ಎಲೆಕ್ಟ್ರಾನಿಕ್ ಮಾಧ್ಯಮಗಳ ಅಬ್ಬರದೆದುರು ಸಾಹಿತ್ಯ, ರಂಗಭೂಮಿಗಳ ಚಟುವಟಿಕೆ ಕುಸಿಯುತ್ತಿದೆ ಎಂಬ ಆರೋಪ ಗಂಭೀರವಾಗಿಯೇ ಕೇಳಿಬರುತ್ತದೆ. ಈ ಆರೋಪದ ಮಧ್ಯೆಯೂ ರಂಗಶಂಕರದ ರಂಗ ಚಟುವಟಿಕೆಗಳಿಗೆ ಸುಗ್ಗಿಯ ಕಾಲವೇ, ಸದಾ ಒಂದಿಲ್ಲೊಂದು ರಂಗ ಚಟುವಟಿಕೆಗಳು ರಂಗಶಂಕರದಲ್ಲಿ ನಡೆದೇ ಇರುತ್ತವೆ.

ಆಗಸ್ಟ್ 14 ಮತ್ತು 15ರಂದು ವಿಶೇಷ ರೀತಿಯ ಕಾರ್ಯಕ್ರಮಗಳು ಏರ್ಪಟ್ಟಿದ್ದವು. ಇದರ ರೂವಾರಿಗಳಾಗಿದ್ದವರು ಹೆಸರಾಂತ ನಾಟಕಕಾರ ಗಿರೀಶ ಕಾರ್ನಾಡ, ಅರುಂಧತಿರಾವ್ ಹಾಗೂ ಶ್ರೀನಿವಾಸ್ ಜಿ. ಕಪ್ಪಣ್ಣ, ಕಾರ್ನಾಡರವರು ವಿವರಿಸಿದಂತೆ ಸಾಹಿತ್ಯ, ರಂಗಭೂಮಿ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ವಿಶೇಷವಾಗಿ ತೊಡಗಿಸಿಕೊಂಡ ಮಹಿಳೆಯರನ್ನು ಯಾವುದೇ ನಿರ್ಬಂಧಗಳಿಲ್ಲದೆ ಒಂದೆಡೆ ಸೇರಿಸಿ ಬೆರೆಯುವಂತೆ ಹಾಗೂ ಸಂವಾದದಲ್ಲಿ ತೊಡಗುವಂತೆ ಮಾಡುವುದಾಗಿತ್ತು. ಮುಖ್ಯವಾಗಿ ಭಾರತದ ಪ್ರಖ್ಯಾತ ರಂಗನಿರ್ದೇಶಕರಲ್ಲಿ ಒಬ್ಬರಾದ ನೀಲಮ್ ಮಾನಸಿಂಗ್ ಚೌಧರಿಯವರ ನಿರ್ದೇಶನದ ಎರಡು ನಾಟಕಗಳಾದ 'ದಿ ಸೂಟ್' ಹಾಗೂ 'ನಾಗಮಂಡಲ'ಗಳ ಪ್ರದರ್ಶನ ಹಾಗೂ ನಿರ್ದೇಶಕಿಯೊಂದಿಗೆ ಮುಕ್ತ ಸಂವಾದ ಏರ್ಪಡಿಸಲಾಗಿತ್ತು.

ಯಾವುದೇ ನಿರೀಕ್ಷೆಯಿಲ್ಲದೆ ವಿಚಾರವಿನಿಮಯ, ಸರಸ ಸಲ್ಲಾಪ, ಕಲಾತ್ಮಕ ಹರಟೆಯಲ್ಲಿ ಒಂದುದಿನ ಕಾಲ ಕಳೆಯಲು ಅನುವು ಮಾಡಿಕೊಡುವುದು ಈ ಸ್ನೇಹಕೂಟದ ಉದ್ದೇಶವಾಗಿತ್ತು. ಈ ಕೂಟದಲ್ಲಿ ಮೈಸೂರಿನಿಂದ ಚ. ಸರ್ವಮಂಗಳ, ಮೀರಾ ಮೂರ್ತಿ, ಮೀನಾ ಮೈಸೂರು, ಪ್ರೀತಿ ಶುಭಚಂದ್ರ, ಸಾಗರದಿಂದ ಮಾಲತಿ ಸಾಗರ್, ಪ್ರತಿಭಾ, ಧಾರವಾಡದಿಂದ ಹೇಮಾ ಪಟ್ಟಣಶೆಟ್ಟಿ, ಹೊಸಪೇಟೆಯಿಂದ ಹೆಚ್. ನಾಗವೇಣಿ, ಬೆಳಗಾವಿಯಿಂದ ಗಂಗಾಸ್ವಾಮಿ, ಹಾವೇರಿಯಿಂದ ಸಮಾಜ ಕಾರ್ಯಕರ್ತೆ ಮಾಧುರಿ, ಶಿವಮೊಗ್ಗದಿಂದ ಸುಶೀಲಾ ನೆಲ್ಲೀಸರ, ಕೋಲಾರದಿಂದ ಉತ್ತನೂರು ರಾಜಮ್ಮ ಶೆಟ್ಟಿ, ಬೆಂಗಳೂರಿನಿಂದ ವನಮಾಲಾ ವಿಶ್ವನಾಥ್, ಎಸ್.ವಿ. ಪ್ರಭಾವತಿ, ಎಚ್.ಎಲ್. ಪುಷ್ಪ, ಉಮಾರಾವ್, ಮಮತಾ ಸಾಗರ್, ಹೆಚ್.ಎನ್. ಆರತಿ, ಎನ್.ಮಂಗಳಾ, ಡಿ.ಸಿ. ಗೀತ, ಎಂ.ಆರ್. ಭಗವತಿ, ದಾವಣಗೆರೆಯಿಂದ ಬಿ.ಟಿ. ಜಾಹ್ನವಿ ಮತ್ತಿತರರು ಭಾಗವಹಿಸಿದ್ದರು. ಹಳೆಯ ತಲೆಮಾರನ್ನು ಒಳಗೊಂಡಂತೆ ಹೊಸ ತಲೆಮಾರಿನ ಚಿಂತಕರು ಇಲ್ಲಿ ಸೇರ್ಪಡೆಯಾಗಿದ್ದರು.

'ದಿ ಸೂಟ್' ದಕ್ಷಿಣ ಆಫ್ರಿಕಾದ ಬರಹಗಾರ್ತಿ ಕೆನ್ ಥೆಂಬಾ ಅವರ ನಾಟಕೀಯ ಗುಣವುಳ್ಳ ಸಣ್ಣಕತೆ. ಪಂಜಾಬಿಯಲ್ಲಿ ಸುರ್‌ಜಿತ್ ಪಾಟ್ಕರ್ ನಾಟಕೀಕರಣಗೊಳಿಸಿದ್ದಾರೆ. 24 ವರ್ಷಗಳಿಂದ 'ಕಂಪನಿ' ರಂಗ ತಂಡವನ್ನು ಯಶಸ್ವಿಯಾಗಿ ನಡೆಸುತ್ತಿರುವ ನೀಲಂ ಮಾನಸಿಂಗ್ ಈ ನಾಟಕವನ್ನು ನಿರ್ದೇಶಿಸಿದ್ದಾರೆ. ಕೆನ್ ಥೆಂಬಾ ಇದರ ಮೂಲಕತೆಯನ್ನು ಬರೆದದ್ದು ಅಧಿಕಾರಶಾಹಿ ರಾಜಕೀಯ ವ್ಯವಸ್ಥೆಯಲ್ಲಿ ವಿವಿಧ ವರ್ಣಗಳಿಗೆ ಸೇರಿದವರು ಛಿದ್ರವಾಗಿ ಹೋಗುವುದನ್ನು ಚಿತ್ರಿಸಲೆಂದು. ತಮ್ಮದೇ ಆದ ಭಾಷೆ, ಸಾಂಸ್ಕೃತಿಕ ಹಿನ್ನೆಲೆ, ರಾಜಕೀಯ ಚರಿತ್ರೆಯುಳ್ಳ ನಾಟಕಗಳನ್ನು ಭಿನ್ನ ಸಂಸ್ಕೃತಿಯಲ್ಲಿ ಮೈತಳೆಯುವಂತೆ ಮಾಡುವಾಗ ಹಲವು ಸಮಸ್ಯೆಗಳು ತಲೆಯೆತ್ತುತ್ತವೆ. ತಮ್ಮ ಸಹಜ ಸ್ವಭಾವದಿಂದಲೇ ದ್ರೋಹಕ್ಕೆ ಒಳಗಾದ ಪಾತ್ರಗಳನ್ನು ನೀಲಮ್ ವಾಸ್ತವವೆಂಬಂತೆ ಚಿತ್ರಿಸಿದ್ದಾರೆ. ಗಂಡ ಹೆಂಡಿರ ಮಧ್ಯೆ ಇರಬೇಕಾದ ಲೈಂಗಿಕ ಪ್ರಾಮಾಣಿಕತೆಯನ್ನು ಕುರಿತು ಪ್ರಶ್ನಿಸುವ ಈ ನಾಟಕ ದಂಪತಿಯ ಮಧ್ಯೆ, ನಾಲ್ಕುಗೋಡೆಗಳ ನಡುವಿನ ಕ್ರೂರ ಹಾಗೂ ನೈತಿಕ ದ್ವಂದ್ವಗಳನ್ನು ಚಿತ್ರಿಸುತ್ತದೆ. ವಿಶಾಲವಾದ ವೇದಿಕೆಯನ್ನು ಅಡಿಗೆಮನೆ, ಬೆಡ್‌ರೂಮ್, ಡೈನಿಂಗ್ ಹಾಲ್‌ನಂತೆ ಚಿತ್ರಿಸುವುದಲ್ಲದೆ ಮತ್ತೊಂದು ಬದಿಯಲ್ಲಿ ಮನೆಯಿಂದ ಹೊರಗಿನ ಜಗತ್ತನ್ನು ಚಿತ್ರಿಸಲಾಗಿದೆ. ಹೆಂಡತಿಯನ್ನು ಅಪಾರವಾಗಿ ಪ್ರೀತಿಸುವ ಗಂಡ ಅವಳ ಸಂತೋಷಕ್ಕಾಗಿ ಏನು ಮಾಡಲೂ ಸಿದ್ಧ. ಅವಳನ್ನು ರಂಜಿಸಲೆಂದು ಟೀ ಕಾಯಿಸುತ್ತಾನೆ, ಹೆಣ್ಣಿನಂತೆ ಉಡುಪು ತೊಡುತ್ತಾನೆ. ಆದರೆ ಒಂದು ದಿನ ತನ್ನ ಹಾಸಿಗೆಯಲ್ಲಿ ಅವಳ ಪ್ರಿಯಕರನನ್ನು ಕಾಣುತ್ತಾನೆ. ಭೀತನಾದ ಪ್ರಿಯಕರ ಭಯದಿಂದ ತನ್ನ ಸೂಟ್‌ಅನ್ನು ಅಲ್ಲೇ ಬಿಟ್ಟು ಪರಾರಿಯಾಗುತ್ತಾನೆ.

ಪ್ರಿಯಕರನ 'ಸೂಟ್' ಹಿಡಿದು ಅವಳನ್ನು ಬೇಟೆಯಾಡಲು ತೊಡಗಿದ ಗಂಡ ಆ ಸೂಟನ್ನು ಯಾವಾಗಲೂ ಕೈಲಿ ಹಿಡಿಯುವ ಶಿಕ್ಷೆಯನ್ನು ಕ್ರೌರ್ಯವೆಂಬಂತೆ ಹೇರುತ್ತಾನೆ. ಊಟ ಮಾಡುವಾಗ, ಹೊರಗೆ ಹೊರಡುವಾಗ, ಗಂಡನ ಜೊತೆಯಲ್ಲಿದ್ದಾಗಲೂ ಆ ಸೂಟ್ ಅವಳನ್ನು ಎಡೆಬಿಡದೆ ಅಂಟಿಕೊಳ್ಳುತ್ತದೆ. ಅವಳು ತನ್ನ ಅಪರಾಧವನ್ನು ಮರೆಯಲು ಯತ್ನಿಸಿದಷ್ಟೂ 'ಆ ಸೂಟ್' ಮತ್ತೆ ಮತ್ತೆ ಕಾಡುತ್ತದೆ. ಸಂಭ್ರಮದಿಂದ, ಚೆಲ್ಲಾಟದಿಂದ ಆರಂಭವಾಗುವ ನಾಟಕ ವಿಷಾದಕ್ಕೆ ಮಾರ್ಗಾಂತರಗೊಂಡು, ಗಂಡ ಬೇಟೆಗಾರನಾಗುತ್ತಾನೆ; ಹೆಂಡತಿ ಬಲಿಪಶುವಾಗುತ್ತಾಳೆ. ಆ ಸೂಟ್ ಅನ್ನು ಶಿಲುಬೆಯಂತೆ ಸದಾ ಕೈಯಲ್ಲಿ ಹಿಡಿದ

THE SUIT



ಹೆಂಡತಿ ಗಂಡನ ಕ್ರೌರ್ಯ ಹೆಚ್ಚಿದಷ್ಟೂ ಏಕಾಂಗಿಯಾಗುತ್ತಾಳೆ, ಅಸಹಾಯಕಳಾಗುತ್ತಾಳೆ. ಮುಂದೆ ಈ ಅಸಹಾಯಕತೆಯೇ ಅವಳಲ್ಲಿಯ ತನ್ನತನವನ್ನು ಬಡಿದೆಬ್ಬಿಸುತ್ತದೆ. ತಮ್ಮಿಬ್ಬರ ಘರ್ಷಣೆಗೆ ಆ ಕೋಟನ್ನು ಅಪ್ಪಿಕೊಳ್ಳುವುದು, ಆ ಮೂಲಕ ಒಪ್ಪಿಕೊಳ್ಳುವುದೇ ಸರಿಯಾದ ಉತ್ತರವೆಂದು ಕಂಡುಕೊಳ್ಳುತ್ತಾಳೆ. ಇಡೀ ನಾಟಕದಲ್ಲಿ ಸೂಟ್ ಹೆಣ್ಣು ತನಗೆ ನಿಷ್ಠಳಾಗಿರಬೇಕು ಎಂದು ಒತ್ತಾಯಿಸುವ ಗಂಡಿನ ಗೋಳೆಂಬಂತೆ, ದಾಂಪತ್ಯದಲ್ಲಿ ಹೆಣ್ಣಿನ ನಿಷ್ಠೆಯಲ್ಲಿನ ಬಿರುಕೆಂಬಂತೆ ಬಳಕೆಯಾಗುತ್ತದೆ.

ಬೇಟೆಗಾರನನ್ನು ಹಿಮ್ಮೆಟ್ಟಿಸುವ ಬೇಟೆಯ ಪಶುವೆಂಬಂತೆ, ದಾಳಿಗೆ ಪ್ರತಿದಾಳಿಯೆಂಬಂತೆ ಇಲ್ಲಿನ ಆಟ ಮುಂದುವರೆದು ಸಬಲರಿಂದ ದೌರ್ಜನ್ಯಕ್ಕೆ ಒಳಗಾದವರ, ದುರ್ಬಲರ ರಾಜಕಾರಣವು ಲೈಂಗಿಕ ರಾಜಕಾರಣವೆಂಬಂತೆ ಇಲ್ಲಿ ಸಾಂಕೇತಿಕವಾಗಿ ಗೋಚರವಾಗುತ್ತದೆ.

ಒಂದು ಕ್ಷಣವೂ ನೋಡುಗರಿಗೆ ಸುಮ್ಮನೆ ಕೂರುವಂತೆ ಮಾಡದ ಈ ನಾಟಕ ತನ್ನ ಬಿಗಿಯಾದ ಬಂಧದಿಂದಲೇ ಗೆಲ್ಲುತ್ತದೆ. ಪಾತ್ರಗಳು ಬಳಸುವ ರಂಗ ಪರಿಕರಗಳು, ಊಟಮಾಡುವುದು, ಟೀ ಕಾಯಿಸುವುದು, ಸ್ನಾನ ಮಾಡುವುದು ಈ ಕ್ರಿಯೆಗಳ ನಡುವೆ ಅಂತರವಿಲ್ಲದೆ ಒಂದೇ ಓಟದಲ್ಲಿ ನಡೆಯುತ್ತದೆ. ಪಾತ್ರಗಳಿಗೆ ಒಂದು ಭಾಷೆಯಿದ್ದಂತೆ ದೈಹಿಕ ವಿವರಗಳು ಮತ್ತು ಅದರ ಬಳಕೆಗೂ ಸಂವಾದಿಯಾದ ಭಾಷೆಯೊಂದು ಬಳಕೆಯಾಗುತ್ತದೆ. ಗಂಡು ಶರೀರದ ಆಪ್ಯಾಯತೆ, ಬಣ್ಣ, ಹೊಳಪು, ಚಲನೆಗೆ ವಿಶೇಷ ಒತ್ತುಕೊಡಲಾಗಿದ್ದು ಈ ಆಂಗಿಕ ಭಾಷೆಗಳು ತಂತ್ರವೆಂಬಂತೆ ಬಳಕೆಯಾಗಿವೆ. ಎಲ್ಲೂ ತನ್ನ ಬಿಗಿಯನ್ನು ಬಿಟ್ಟುಕೊಡದೆ ನಾಲ್ಕು ಗೋಡೆಗಳ ಮಧ್ಯೆಯೇ ಸಾಗುವ ಕಥೆ ಗೋಡೆಗಳಿಂದ ಆಚೆ ಸಾಮಾಜಿಕ ಆಯಾಮವೊಂದನ್ನು ಪಡೆಯುವಲ್ಲಿ ವಿಫಲವಾಗಿದೆಯಲ್ಲವೇ ಎಂಬ ಆರೋಪವನ್ನು ಸಹ ಈ ಸಂದರ್ಭದಲ್ಲಿ ಎತ್ತಲಾಯಿತು. ಸಂಪೂರ್ಣ ನಿರ್ದೇಶಕರ ನಿರ್ದೇಶನದಿಂದಲೇ ಗೆದ್ದ ನಾಟಕವಿದಾದರೂ ಗಂಡನಾಗಿ ನಟಿಸಿದ ವಾಜಿಂದರ್ ಭಾರದ್ವಾಜ್, ಹೆಂಡತಿಯಾಗಿ ನಟಿಸಿದ ರಮಣಜೀತ್ ಕೌರ್ ಅವರಿಗೂ ಈ ಯಶಸ್ಸಿನ ಬಹುಪಾಲು ಸಂದಿದೆಯೆಂದೇ ಹೇಳಬಹುದಾಗಿದೆ. ಸರಳವಾದ ಪಂಜಾಬಿ ಭಾಷೆ ಹಾಗು ಇಂಗ್ಲಿಷ್‌ನ ಮಿಶ್ರಣ ಪ್ರೇಕ್ಷಕರು ನಾಟಕ ಗ್ರಹಿಸುವಲ್ಲಿ ತೊಂದರೆಯನ್ನು ಉಂಟುಮಾಡಲಿಲ್ಲ.

**ನಾಗಮಂಡಲ**

ಎರಡನೆಯ ದಿನ ಗಿರೀಶಕಾರ್ನಾಡರ 'ನಾಗಮಂಡಲ' ಪಂಜಾಬಿ ಭಾಷೆಯಲ್ಲಿ ಪ್ರದರ್ಶನವಾಯಿತು. ಪಂಜಾಬಿಯ ಅನುವಾದ ಸುರಜಿತ್ ಪಾಟ್ಕರ್ ಅವರದು. ಮೂಲದ ಕಥಾಚೌಕಟ್ಟಿಗೆ ನಿಷ್ಠೆ ತೋರಿದ ನಿರ್ದೇಶಕಿ ತನ್ನ ನಿರ್ದೇಶನದಲ್ಲಿಯ ಹೊಸತನದಿಂದಾಗಿಯೇ ಗಮನ ಸೆಳೆಯುತ್ತಾರೆ. 1989ರಲ್ಲಿ ನೀಲಮ್ ಈ ನಾಟಕ ನಿರ್ದೇಶಿಸಿದರು. 2005ರಲ್ಲಿ ಮತ್ತೆ ಕೈಗೆತ್ತಿಕೊಂಡಾಗ ಮೊದಲ ಪ್ರದರ್ಶನಕ್ಕಿಂತ ಭಿನ್ನವಾಗಿಯೇ ನಿರ್ದೇಶಿಸಿದ್ದಾರೆ. ಮೊದಲು ನಟಿಸಿದವರಲ್ಲಿ ಕೆಲವರು ಮಾತ್ರ ಉಳಿದಿದ್ದು ಹಳೆಯ ನೆನಪುಗಳನ್ನು ಒರೆಸಿ ಹೊಸದಾಗಿ ನಿರ್ದೇಶಿಸಬೇಕಾಯಿತು. ನೀಲಮ್ ಅದನ್ನು ಸವಾಲೆಂಬಂತೆ ತೆಗೆದುಕೊಳ್ಳುತ್ತಾರೆ.

ಕನ್ನಡದ ಪ್ರಸಿದ್ಧ ಲೇಖಕ ಎ.ಕೆ. ರಾಮಾನುಜನ್ ಹೇಳಿದ ಜನಪದ ಕತೆಯೊಂದನ್ನು ಆಧರಿಸಿ ಗಿರೀಶ ಕಾರ್ನಾಡ 'ನಾಗಮಂಡಲ' ಬರೆದರೆ, ಕವಿತೆ ಬರೆಯಲೆಂದು ಹೊರಟ ಚಂದ್ರಶೇಖರ ಕಂಬಾರರು 'ಸಿರಿ ಸಂಪಿಗೆ'ಯೆಂಬ ನಾಟಕ ಬರೆದರು. ಅದಲು ಬದಲುಗಳ ಪರಂಪರೆಯು ಕನ್ನಡದಲ್ಲಿ ಈ ಇಬ್ಬರು ನಾಟಕಕಾರರಿಂದ ಹೆಚ್ಚು ಪ್ರಚಲಿತವಾಯಿತು. ಮನುಷ್ಯನ ಅಪೂರ್ಣತೆಯನ್ನು ತುಂಬಿಕೊಳ್ಳುವುದಕ್ಕಾಗಿಯೇ ಇನ್ನೊಂದು ಶರೀರದ ಅವಶ್ಯಕತೆಯನ್ನು ಇಲ್ಲಿ ಒತ್ತಿ ಹೇಳಲಾಯಿತು. ಮಾನವ ಸ್ವಭಾವದ ಪ್ರಾಣಿ ಹಾಗೂ ಪ್ರಾಣಿ ಸ್ವಭಾವದ ಮಾನವನನ್ನು ರಾತ್ರಿ, ಹಗಲುಗಳೆಂಬಂತೆ ಆವರ್ತನಗೊಳಿಸಲಾದ ಈ ನಾಟಕದಲ್ಲಿ ನೀಲಮ್

*ನೀಲಂ ಮಾನಸಿಂಗ್ ಚೌಧರಿ*

*ಕಳೆದ 24 ವರ್ಷಗಳಿಂದಲೂ ಕಂಪನಿ ತಂಡವನ್ನು ನಡೆಸುತ್ತಿರುವ ನೀಲಂ ಮಾನಸಿಂಗ್ ಚೌಧರಿ ಭಾರತದ ಹಲವು ಪ್ರತಿಭಾವಂತ ರಂಗ ನಿರ್ದೇಶಕರಲ್ಲಿ ಒಬ್ಬರು. ಯು.ಕೆ.ಯಲ್ಲಿ ಹುಟ್ಟಿ ಬೆಳೆದು ನ್ಯಾಷನಲ್ ಸ್ಕೂಲ್ ಆಫ್ ಡ್ರಾಮಾದಿಂದ ಹೊರ ಹೊಮ್ಮಿದ ನೀಲಮ್ ಹಲವು ರಾಷ್ಟ್ರೀಯ, ಅಂತಾರಾಷ್ಟ್ರೀಯ ನಾಟಕೋತ್ಸವಗಳಲ್ಲಿ ತಮ್ಮ ನಾಟಕಗಳೊಂದಿಗೆ ಭಾಗವಹಿಸಿದ್ದಾರೆ. ಪಂಜಾಬಿನ ಸಂಸ್ಕೃತಿಯನ್ನು ತಮ್ಮ ನಾಟಕಗಳ ಅಂತಸ್ಸತ್ವವಾಗಿಸಿಕೊಂಡ ಇವರು ಸಂಗೀತ, ರೂಪಕ, ಸಂಪ್ರದಾಯದ ಸಂಗತಿಗಳನ್ನು ಅದ್ಭುತವೆನ್ನುವಂತೆ ತಮ್ಮ ನಾಟಕಗಳಲ್ಲಿ ಬೆಸೆಯುತ್ತಾರೆ.*

*ರಂಗಶಂಕರದಲ್ಲಿ ಗಿರೀಶ ಕಾರ್ನಾಡರು ನಡೆಸಿಕೊಟ್ಟ ಮುಕ್ತ ಸಂವಾದದಲ್ಲಿ ತಮ್ಮನ್ನು ಚರ್ಚೆಗೆ ಒಡ್ಡಿಕೊಂಡ ನೀಲಮ್ ಅಲ್ಪಾವಧಿಯಲ್ಲೇ ಹಲವು ವಿಚಾರಗಳನ್ನು ಹಂಚಿಕೊಂಡರು. 'ದಿ ಸೂಟ್' ನಾಟಕದಲ್ಲಿ ಪ್ರಕೃತಿ-ಪುರುಷ, ಸ್ತ್ರೀವಾದದ ಕಲ್ಪನೆಗಳಿಗಿಂತ ತನಗೆ ಮುಖ್ಯವಾದದ್ದು ಹೆಣ್ಣು-ಗಂಡಿನ ದಾಂಪತ್ಯದಲ್ಲಿನ ಹರಯ, ಪ್ರಣಯದ ಚೆಲ್ಲಾಟ, ಸಣ್ಣಪುಟ್ಟ ಸಿಹಿಕಹಿಗಳು. ಕಣ್ಣೆದುರೇ ಅಪನಂಬಿಕೆಯಿಂದ ಕುಸಿದು ಬೀಳುವ ದಾಂಪತ್ಯ; ಬೇಟೆಯ ಬಲಿಯಾದ ಬಲಿಪಶುವೇ ಬೇಟೆಗಾರನನ್ನು ಹಿಮ್ಮೆಟ್ಟಿಸಬೇಕಾದ ಅಗತ್ಯವನ್ನು ಚಿತ್ರಿಸುವುದಾಗಿತ್ತು. ತಮ್ಮ ನಾಟಕದ ಹಿಂದೆ ರಾಜಕಾರಣಗಳಿಲ್ಲದಿದ್ದರೂ ಅದು ಆ ವ್ಯವಸ್ಥೆಯ ಸೂಕ್ಷ್ಮತೆಗಳನ್ನು ಅಡಗಿಸಿಟ್ಟುಕೊಂಡಿದೆ. ಪಾತ್ರಗಳು ತೋರಿಸುವ ಸಣ್ಣಪುಟ್ಟ ದೋಷಗಳೇ ಅವುಗಳ ಪ್ರತಿಭಟನೆಗಳಾಗಿವೆ. ಮತ್ತೆ ಮತ್ತೆ ಕೋಟನ್ನು ಇಸ್ತ್ರಿ ಮಾಡುವುದು, ನೆಲ ಒರೆಸುವುದು, ಹಾಸಿಗೆಯನ್ನು ಸರಿಪಡಿಸುವುದು – ಇವೆಲ್ಲವೂ ರೂಪಕಗಳೇ ಎಂದು ತಮ್ಮ ವಿಚಾರಗಳನ್ನು ಹಂಚಿಕೊಂಡರು.*



ಮಾಡಿಕೊಂಡ ಬದಲಾವಣೆಯೆಂದರೆ ಅಪ್ಪಣ್ಣನಿಗೆ ನಾಗಪ್ಪ ಪ್ರತಿಬಿಂಬ ವಾದಂತೆ, ರಾಣಿಗೆ ನಾಟಕದಲ್ಲಿ ಬರುವ ಕತೆಯನ್ನು ಪ್ರತಿಬಿಂಬ ಮಾಡಿ ಇಬ್ಬರು ರಾಣಿಯರನ್ನು ಚಿತ್ರಿಸುತ್ತಾರೆ. ರಾಣಿ ವಾಸ್ತವವನ್ನು ಎದುರಿಸಿದರೆ ಕತೆಯು ಕಾಲ್ಪನಿಕ ಜಗತ್ತನ್ನು ಬಿಂಬಿಸುತ್ತಾಳೆ. ಇಬ್ಬರನ್ನೂ ಬಿಂಬ ಪ್ರತಿಬಿಂಬಗಳೆಂಬಂತೆ ತೋರುತ್ತಾ ಕನ್ನಡಿಯ ಪ್ರತಿಮೆ, ಕೊಳದ ಪ್ರತಿಮೆ ಯನ್ನು ಬಳಸುತ್ತಾ ಇಬ್ಬರೂ ಒಂದೇ ಎಂದು ಬೆಸೆಯುವ ಪ್ರಯತ್ನವನ್ನು ತೊಡಕಾಗದೆ ನಿರ್ವಹಿಸುತ್ತಾರೆ, ಹಲವುಬಾರಿ ರಾಣಿ ಮತ್ತು ಕತೆಗಳಿಬ್ಬರ ಡೈಲಾಗ್ ಒಂದನ್ನೊಂದು ಪ್ರತಿಬಿಂಬಿಸುವಂತೆಯೇ ರೋಚಕವಾದ ವಾತಾವರಣ ನಿರ್ಮಿಸುತ್ತಾರೆ.

ಹಗಲು ರಾತ್ರಿಗಳ ದ್ವಂದ್ವಗಳಲ್ಲಿ ರಾಣಿ ಎರಡನ್ನೂ ಸಮರ್ಥವಾಗಿ ನಿರ್ವಹಿಸಿದರೂ ದ್ವಂದ್ವದಲ್ಲಿಯೇ ಸಂಸಾರ ನಡೆದುಹೋಗುವುದಲ್ಲದೆ, ಅರಿವಿಲ್ಲದೆ ತನ್ನಲ್ಲಿಯೇ ಛಿದ್ರಳಾಗುತ್ತಾಳೆ. ನೀಲಮ್ ಎರಡನೆಯ ಬಾರಿ ನಿರ್ದೇಶಿಸಿದಾಗ ಹಲವು ಸಮಸ್ಯೆಗಳಿದ್ದವು. ಕನಸು ಮತ್ತು ವಾಸ್ತವತೆಯನ್ನು ಬೇರೆಯಾಗಿ ತೋರಿಸುವುದು ಹೇಗೆ? ಗಂಡನನ್ನು ಹಾವಾಗಿ ಮಾರ್ಪಡಿಸುವುದು ಹೇಗೆ? ಹಿಂದಿನ ಪ್ರದರ್ಶನದ ಛಾಯೆ ಮರುಕಳಿಸದಂತೆ ನಿರ್ದೇಶಿಸುವುದು ಹೇಗೆ? ಆರಂಭದಲ್ಲಿ ಬರುವ ನಾಟಕಕಾರನನ್ನು ನಾಗಪ್ಪನಾಗಿ ಚಿತ್ರಿಸಿ, ಕತೆಯನ್ನು ರಾಣಿಯನ್ನಾಗಿ ರೂಪಿಸಿದ್ದಾರೆ. ನಾಟಕದ ದ್ವಂದ್ವಗಳು ಅಂತ್ಯಗೊಂಡಾಗ ರಾಣಿಯ ಪ್ರತಿಬಿಂಬ ಮರಳಿ ಕತೆಯಾಗಿ ಹಿಂದಿರುಗುತ್ತದೆ. ಇದೊಂದು ಅಪರೂಪದ ಸಮರ್ಥ ಸಂಯೋಜನೆ.

ನೀಲಮ್ ಗ್ರೀಕ್ ಸಂಸ್ಕೃತಿಯ 'ನಾರ್ಸಿಸಿಸ್ ಮತ್ತು ಕೊಳದ' ಕಲ್ಪನೆಯನ್ನು ತಂತ್ರವೆಂಬಂತೆ ಮರಳಿ, ಮರಳಿ ಬಳಸುತ್ತಾರೆ. ದ್ವಂದ್ವವಿದ್ದೆಡೆಯಲ್ಲೆಲ್ಲಾ ಕೊಳದ ಬಳಿ ಮೈಮರೆಯುವ ಪಾತ್ರಗಳು ಕಂಡುಬರುತ್ತವೆ. ನಾಗಪ್ಪ ಉದ್ಭವಿಸಿದ ಸಡಗರವನ್ನು ಒಂದು ಆಚರಣೆಯೆಂಬಂತೆ ಚಿತ್ರಿಸಲಾಗಿದ್ದು ಅಪ್ಪಣ್ಣನಿಗಿಂತ ಅವನು ಹೆಚ್ಚು ವಿಜೃಂಭಿಸು ತ್ತಾನೆ. ಅಪ್ಪಣ್ಣನನ್ನು ಇಲ್ಲಿ ಶಾಮನೆಂದು ಹೆಸರಿಸಲಾಗಿದೆ. ಕುರುಡಜ್ಜಿ ಪಾತ್ರಧಾರಿ ಕನ್ನಡದ ಅದ್ಭುತ ಪ್ರತಿಭೆ ಬಿ. ಜಯಶ್ರೀಯ ಕಲ್ಪನೆಯನ್ನು ಒಡೆಯುವಲ್ಲಿ ವಿಫಲಳಾಗುತ್ತಾಳೆ. ನೀಲಮ್ ನಾಟಕಗಳೆಂದರೆ ಸಹಜತೆ, ವಾಸ್ತವತೆಗೆ ಹತ್ತಿರವಾಗಿದ್ದು ಕಣ್ಣೆದುರೇ ರೊಟ್ಟಿ ಬಡಿದು ಬೇಯಿಸಲಾಗು ತ್ತದೆ. ರೊಟ್ಟಿಯ ವಾಸನೆಯಿಂದ ಕೂಡಿದವು ಎಂಬ ಹೊಗಳಿಕೆಗಳೇನು ಇಲ್ಲಿ ಉತ್ಪ್ರೇಕ್ಷೆಯಾಗುವುದಿಲ್ಲ. ಕಂಪನಿ ತಂಡದಲ್ಲಿ ಮಹಿಳಾ ತಂಡ ಸಾಂಪ್ರದಾಯಿಕ 'ನಕ್ಕಲ್ಸ್' (ಅನುಕರಿಸುವವರು)ಗಳಾಗಿದ್ದು ಇವರು ಹಾಡು ಮತ್ತು ನಟನೆಯಲ್ಲಿ ಪಳಗಿದವರಾಗಿದ್ದಾರೆ.

ಎರಡೂ ದಿನದ ನಾಟಕಗಳ ಆಯ್ಕೆ ಮತ್ತು ನಿರ್ದೇಶನದಲ್ಲಿ ಸ್ಪಷ್ಟವಾದ ಉದ್ದೇಶ ಹಾಗೂ ತಂತ್ರಗಳಿವೆ. ಎರಡೂ ನಾಟಕಗಳ ನಡುವೆ ನಾಲ್ಕುಗೋಡೆಗಳ ಮಧ್ಯೆ ಬಂಧಿತಳಾದ ಹೆಂಡತಿ, ಹೊರಗಿನಿಂದ ಬಂದು ಹೋಗಿ ಬೇಟೆಯಾಡುವ ಗಂಡನ್ನು ಫ್ಯೂಡಲ್ ಶಕ್ತಿಯನ್ನಾಗಿ ಕಾಣಲಾಗಿದೆ. 'ದಿ ಸೂಟ್'ನ ಹೆಣ್ಣು ಸೂಟ್ ಒಂದನ್ನು ಸಹಜವೆಂಬಂತೆ ಸ್ವೀಕರಿಸಿದರೆ – 'ನಾಗಮಂಡಲ'ದ ರಾಣಿ ಗೊಂದಲದ ನಡುವೆಯೂ ತನಗೆ ಸೂಟ್ ಆಗುವ ನಾಗಪ್ಪನನ್ನು ಒಪ್ಪಿಕೊಳ್ಳುತ್ತಾಳೆ. ಬಚ್ಚಿಡಲ್ಪಟ್ಟ ಅಥವಾ ತುಳಿಯಲ್ಪಟ್ಟ ಜೀವಿಗಳ ಆಸೆ ಕನಸುಗಳು ಈಡೇರುವಲ್ಲಿ ಅವುಗಳದೇ ಆದ ಪ್ರಕೃತಿದತ್ತವಾದ ಹೊರಳುದಾರಿಗಳಿರುವುದರ ಕಡೆಗೆ ಈ ನಾಟಕ ಗಮನ ಸೆಳೆಯುತ್ತದೆ. ಎರಡೂ ನಾಟಕಗಳಲ್ಲಿ ಹೆಣ್ಣಿನ ಅದಮ್ಯ ಸಹನಾ ಶಕ್ತಿಯೆದುರು ಕೈಸೋತು ನಿಲ್ಲುವ ಅಸಹಾಯಕ ಗಂಡಿನ ಚಿತ್ರಣವೇ ನಿರ್ದೇಶಕಿ ಹೇಳುವ ಸಂದೇಶವಾಗಿದೆ. ಒಟ್ಟಿನಲ್ಲಿ ಈ ಎರಡೂ ಪಂಜಾಬಿ ನಾಟಕಗಳು ಹೊಸ ರೀತಿಯ ಪ್ರಯೋಗ ಗಳಾಗಿದ್ದು ಹೆಣ್ಣು, ಗಂಡುಗಳೆಂಬ ವಾದಗಳಿಲ್ಲದೆ ಪ್ರಬಲವಾದುದರ ಎದುರು ದುರ್ಬಲವಾದದ್ದು ತನ್ನ ಅಸ್ತಿತ್ವಕ್ಕಾಗಿ ನಡೆಸಿದ ಮೌನಯುದ್ಧ ಹಾಗೂ ಪಡೆದ ಗೆಲುವುಗಳ ರೂಪಕಗಳಾಗಿಯೇ ನಿಲ್ಲುತ್ತವೆ. ❑

*ತಾಯ್ತನದ ವೈಭವೀಕರಣ ತುಂಬಾ ಭಾರವಾದದ್ದು. ಆದರ್ಶ ತಾಯಿ ಎಂದರೆ ಮದರ್ ಇಂಡಿಯಾದಲ್ಲಿ ಶಿಲುಬೆಯನ್ನು ಅವಳ ಬೆನ್ನಿಗೆ ಕಟ್ಟಿಕೊಂಡು ಎಳೆದು ನಡೆದಂತೆ.*

* * *

*ಮಹಿಳೆಯರನ್ನು ಹಾಗೂ ತಾಯಂದಿರನ್ನು ಕೀಳು ದೃಷ್ಟಿಕೋನದಿಂದ ನಡೆಸಿಕೊಳ್ಳುವ ಸಮೂಹ ಅಪರಾಧಿ ಮನೋಭಾವನೆಯಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ಭಾರತದಂತಹ ಪಿತೃಪ್ರಧಾನ ಸಮಾಜದಲ್ಲಿ ತಾಯಿಯನ್ನು ದೇವತೆಯಂತೆ ಆರಾಧಿಸುತ್ತಾರೆ ಎಂದು ಸಮಾಜಶಾಸ್ತ್ರಜ್ಞರು ಹಾಗೂ ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ.*

***–ಮೇಘಾ ಪಾಠಕ್**, ಪತ್ರಕರ್ತೆ*

# ಉಲ್ಲಂಘನೆ ಮತ್ತು ಚಕ್‌ದೇ ಇಂಡಿಯಾ: ಒಂದು ಟಿಪ್ಪಣಿ

● *ಚಿತ್ರಾಂಗದ*

ಕೆಲವೊಮ್ಮೆ ಚಲನಚಿತ್ರಗಳನ್ನು ನೋಡುವಾಗ ನಾನು ಭಾವುಕನಾಗುತ್ತೇನೆ. ಅದನ್ನು ಸೆಲ್ಯೂಲಾಯಿಡ್‌ನ ಶಕ್ತಿ ಅಥವಾ ನನ್ನ ದೌರ್ಬಲ್ಯ ಎಂದಾದರೂ ಭಾವಿಸಬಹುದು. ನಮ್ಮ ಕೈಲಾಗದ್ದನ್ನು ತೆರೆಯ ಮೇಲೆ ಇತರರು ಸಾಧಿಸುತ್ತಿರುವಾಗ ನನ್ನ ವಿವೇಚನಾ ಶಕ್ತಿ ಸ್ವಲ್ಪವಾದರೂ ಮಂಕಾಗುವುದನ್ನು ಬೇರೆ ರೀತಿಯಲ್ಲಿ ಅರ್ಥೈಸಲು ನನ್ನಿಂದ ಸಾಧ್ಯವಿಲ್ಲ. ಆದರೆ ಇದೇ ಚಿತ್ರವನ್ನು ಎರಡನೇಬಾರಿಗೆ ಅಥವಾ ಮೂರನೇ ಬಾರಿಗೆ ನೋಡಿದಾಗ ಅದರ ಮಿತಿ–ಶಕ್ತಿಗಳನ್ನು ನಿರ್ಭಾವುಕವಾಗಿ ನೋಡಲು ಸಾಧ್ಯವಾಗುತ್ತದೆ.

ನಾನು ಈ ರೀತಿ ಸ್ವಲ್ಪ ಭಾವುಕನಾದದ್ದು ಬೆಂಗಳೂರಿನ 'ಅಭಿನಯ್' ಚಿತ್ರಮಂದಿರದಲ್ಲಿ ನನ್ನ ಆತ್ಮೀಯ ಗೆಳೆಯರಿಬ್ಬರೊಂದಿಗೆ ಅಶುತೋಷ್ ಗೋವಾರಿಕರ್‌ನ 'ಲಗಾನ್' ಚಿತ್ರ ನೋಡಿದಾಗ. ಈ ಚಿತ್ರದಲ್ಲಿ ಹಳ್ಳಿಗಾಡಿನ ಜನರ ತಂಡವೊಂದು, ಅಸಾಧ್ಯವೆಂದು ನಾವು ಭಾವಿಸುವುದನ್ನು ಅದಕ್ಕಿರುವ ಎಲ್ಲ ಅಡೆ ತಡೆಗಳನ್ನು ಮೀರಿ, (ಅದು ಸೆಲ್ಯೂಲಾಯಿಡ್‌ನ ಮೇಲೆ ಸಾಧ್ಯವೆಂದು ತಿಳಿದೂ) ಶಕ್ತ ಆಂಗ್ಲರ ತಂಡವೊಂದನ್ನು ಕ್ರಿಕೆಟ್‌ನಲ್ಲಿ ಮಣಿಸಿದಾಗ, ಆ ಗೆಲುವು ನನ್ನನ್ನು ಕ್ಷಣಕಾಲ ಭಾವುಕನನ್ನಾಗಿಸಿದ್ದು ನಿಜ. ಆ ರೋಮಾಂಚನ ಇನ್ನೂ ನನ್ನಲ್ಲಿ ಹಸಿರಾಗಿದೆ. 'ಅಂಥ' ಗೆಲುವು ಅದು.

ನಾಗೇಶ್ ಕುಕುನೂರ್ ನಿರ್ದೇಶನದ 'ಇಕ್ಬಾಲ್' ನೋಡಿದಾಗಲೂ ಇದೇ ಭಾವ. ಆಂಧ್ರಪ್ರದೇಶದ ಮೂಲೆಯ ಗ್ರಾಮವೊಂದರ, ಭಾರತ ತಂಡವನ್ನು ಪ್ರತಿನಿಧಿಸುವ ಕನಸು ಹೊತ್ತ ಹುಡುಗನೊಬ್ಬ (ಶ್ರೇಯಸ್ ತಲ್ಪಡೆ) ಹೃದಯವಂತ–ಕುಡುಕ ಕೋಚ್ (ನಾಸಿರುದ್ದೀನ್ ಷಾ) ನೆರವಿನಿಂದ ಕ್ರಿಕೆಟ್‌ರಂಗದ ಎಲ್ಲ ಕೊಳಕುತನ ಪಕ್ಷಪಾತವನ್ನೂ ಮೀರಿ ಭಾರತ ಕ್ರಿಕೆಟ್ ತಂಡದಲ್ಲಿ ಸ್ಥಾನ ಗಿಟ್ಟಿಸುವ ಕಥೆಯ ಹಂದರದ ಈ ಚಿತ್ರ ನನ್ನನ್ನು ಕಲಕಿತ್ತು. ರೋಮಾಂಚನಗೊಳಿಸಿತ್ತು.

ನಾನು ಮತ್ತೆ ಅದೇ ರೀತಿಯ ರೋಮಾಂಚನ ಅನುಭವಿಸಿದ್ದು, ಭಾವುಕನಾದದ್ದು ಶಿಮಿತ್ ಅಮೀನ್‌ರ 'ಚಕ್‌ದೇ ಇಂಡಿಯಾ' ಚಿತ್ರವನ್ನು ಮೈಸೂರಿನ ಸ್ಟರ್ಲಿಂಗ್ ಚಿತ್ರಮಂದಿರದಲ್ಲಿ ನೋಡಿದಾಗ. ಚಿತ್ರ ನೋಡಿ ಹೊರ ಬಂದಾಗ ಅದು ನನ್ನ ಮಟ್ಟಿಗೆ ಭಾರತದ ಮಹಿಳಾ ಹಾಕಿತಂಡದ ಗೆಲುವಷ್ಟೇ ಆಗಿರಲಿಲ್ಲ. ಅದು ಕೋಟ್ಯಂತರ ಮಂದಿ ಅವಕಾಶಹೀನರ ಗೆಲುವು ಅನ್ನಿಸಿತು. ಮನಸೆಲ್ಲ ಖಾಲಿಖಾಲಿಯಾಗಿತ್ತು. ಆದರೆ ಕಳೆದುಹೋದ ಆತ್ಮವಿಶ್ವಾಸವನ್ನು ಮತ್ತೆ ಗಳಿಸಿಕೊಂಡಂತಾಗಿತ್ತು.

[illegible] ಜನಗಳು ಅಪಾರ




ಯಶಸ್ಸು ಗಳಿಸಿರುವ ನಿದರ್ಶನ ಹಾಲಿವುಡ್‌ನಲ್ಲಿ ಸಾಕಷ್ಟಿದೆ. ಆಸ್ಕರ್ ಪ್ರಶಸ್ತಿ ಪುರಸ್ಕೃತ 'ಚಾರಿಯಟ್ಸ್ ಆಫ್ ಫೈರ್' ಹಾಗೂ ಫುಟ್‌ಬಾಲ್ ಕ್ರೀಡೆಯ 'ಎಸ್ಕೇಪ್ ಟು ವಿಕ್ಟರಿ' ಇದಕ್ಕೆ ಸ್ಪಷ್ಟ ನಿದರ್ಶನ. ಆದರೆ ಬಾಲಿವುಡ್‌ನಲ್ಲಿ ಕ್ರೀಡೆಯನ್ನೇ ಮೂಲ ವಸ್ತುವನ್ನಾಗಿಸಿಕೊಂಡೂ ಯಶಸ್ವಿಯಾದ ಚಿತ್ರಗಳು ತೀರಾ ಕಡಮೆ. ಬಹುಶಃ ಆ ಮಟ್ಟದ ಯಶಸ್ಸು ಸಾಧಿಸಿದ್ದು 'ಲಗಾನ್'ವೊಂದೇ ಇರಬೇಕು. ಅನಂತರ 'ಚಕ್ ದೇ ಇಂಡಿಯಾ' ಅದೇ ಹಾದಿಯಲ್ಲಿ ಸಾಗಿದೆ. 'ಲಗಾನ್' ಚಿತ್ರದಲ್ಲಿ ಗೆಲುವು ಹಳ್ಳಿಗಾಡಿನ ಸಮುದಾಯವೊಂದು ತಾನು ಕಂಡು ಕೇಳರಿಯದ 'ವಸಾಹತುಶಾಹಿ' ಕ್ರೀಡೆಯೊಂದರಲ್ಲಿ ಸಾಧಿಸಿದ ಗೆಲುವು, ಅವರ ಆಟದಲ್ಲಿ ಅವರನ್ನೇ ಸೋಲಿಸಿದ ಗೆಲುವಿಗಿಂತ ಹೆಚ್ಚಾಗಿ ವಸಾಹತುಶಾಹಿ ಶಕ್ತಿಯ ವಿರುದ್ಧ 'ಗುಲಾಮರು' ಗಳಿಸಿದ ಗೆಲುವು. ಈ ಗೆಲುವಿನ ಹೊರತಾಗಿ ಚಿತ್ರ ವಿಶೇಷ ಅರ್ಥಗಳನ್ನೇನೂ ಧ್ವನಿಸುವುದಿಲ್ಲ. ಈ ಚಿತ್ರ ಅದರ ಯಶಸ್ಸಿಗೆ ಅಗತ್ಯವಾದ ಎಲ್ಲ ವ್ಯಾಪಾರಿ ಸರಕುಗಳ ಪರಿಪಾಕ. ಇದರಲ್ಲಿ ಬಾಲಿವುಡ್‌ನ ಸಾಂಪ್ರದಾಯಿಕ ಸೂತ್ರಗಳು ಯಶಸ್ವಿಯಾಗಿ ಕೆಲಸ ಮಾಡಿವೆ. (ನಾಯಕ–ನಾಯಕಿಯರ ಪ್ರೀತಿ, ಗಳಿಸಲಾಗದ ಪ್ರೀತಿ, ಮೋಸ, ದ್ವೇಷ, ವಂಚನೆ, ಹಾಡು, ಸೆಂಟಿಮೆಂಟು ಏನುಂಟು ಏನಿಲ್ಲ) ಸಾಂಪ್ರದಾಯಿಕ ಫಾರ್ಮ್ಯುಲಾದ ಪರಿಪಕ್ವ ಪಾಕ 'ಲಗಾನ್'! ಈ ಚಿತ್ರದಲ್ಲಿ ಸಿದ್ಧಸೂತ್ರಗಳನ್ನು ಮುರಿಯುವ ನಿರ್ದೇಶಕನ ಯಾವುದೇ ಪ್ರಜ್ಞಾಪೂರ್ವಕ ಪ್ರಯತ್ನ ಕಾಣುವುದಿಲ್ಲ.

ಚಿತ್ರವೊಂದರ ಕಮರ್ಷಿಯಲ್ ಯಶಸ್ಸಿನತ್ತಲೂ ಕಣ್ಣಿಟ್ಟವರಿಂದ ಇದರ ನಿರೀಕ್ಷೆಯೂ ಅಸಾಧ್ಯ. ಆದರೆ 'ಚಕ್‌ದೇ' ಹಾಗಲ್ಲ. ಕಮರ್ಷಿಯಲ್ ಯಶಸ್ಸಿನ ಮೇಲೆ ಕಣ್ಣಿಟ್ಟೂ ಚಿತ್ರರಂಗದ ರೂಢಿಗತ ಸಿದ್ಧ ಸೂತ್ರಗಳನ್ನು ಮುರಿಯುವ ಒಂದು ಪ್ರಯತ್ನದಂತೆ ಕಾಣುತ್ತದೆ.

"ಜೋ ನಹಿ ಹೋಸಕ್ತಾ ಹೈ ವಹೀತೋ ಕರ್‍ನಾ ಹೈ !"

ಅರ್ಜೆಂಟೀನಾ ವಿರುದ್ಧ ನಡೆಯುವ ಪಂದ್ಯದ ಹಾಫ್‌ಟೈಮ್‌ನಲ್ಲಿ ಮಹಿಳಾ ಹಾಕಿ ತಂಡದ ಕೋಚ್ ಕಬೀರ್‌ಖಾನ್ (ಶಾರುಖ್ ಖಾನ್). ತನ್ನ ಟೀಂ ಇಂಡಿಯಾಕ್ಕೆ ಗೆಲುವು ಸಾಧಿಸಲು ಎಲ್ಲ ನಿಯಮಗಳನ್ನು ಮುರಿಯುವುದೂ ಸೇರಿದಂತೆ, ಏನೆಲ್ಲ ಮಾಡಬಹುದೋ ಎಲ್ಲವನ್ನೂ ಮಾಡುವಂತೆ ಉತ್ತೇಜಿಸುತ್ತಾನೆ. ತಂಡದ ಆಟಗಾರ್ತಿಯರು ತಮ್ಮ ಕೋಚ್ ಆದೇಶವನ್ನು ಅಕ್ಷರಶಃ ಪಾಲಿಸಿ ಗೆಲುವು ಸಾಧಿಸುತ್ತಾರೆ.

ಇದೇ ಧೋರಣೆಯನ್ನು ಹೊತ್ತೇ 'ಚಕ್‌ದೇ ಇಂಡಿಯಾ' ಇಂದು ಭಾರತಾದ್ಯಂತ ಎಲ್ಲ ವರ್ಗದ ಪ್ರೇಕ್ಷಕರ ಮನಸ್ಸನ್ನೂ ಗೆದ್ದಿದೆ. ಇದಕ್ಕೆ ಸಾಕ್ಷಿ ಇತ್ತೀಚೆಗೆ ನಡೆದ ಭಾರತ–ಪಾಕಿಸ್ತಾನ ನಡುವಿನ ಟ್ವೆಂಟಿ:20 ವಿಶ್ವಕಪ್ ಕ್ರಿಕೆಟ್ ಪಂದ್ಯ. ಜೋಹಾನ್ಸ್‌ಬರ್ಗ್‌ನ 'ವಾಂಡರರ್ಸ್' ಕ್ರೀಡಾಂಗಣದಲ್ಲಿ ರಾರಾಜಿಸಿದ್ದು 'ಚಕ್‌ದೇ ಇಂಡಿಯಾ' ಎಂಬ ಪ್ಲಕಾರ್ಡ್. ಧೋನಿ ತಂಡ ಕಣಕ್ಕಿಳಿದಾಗ ಪ್ರೇಕ್ಷಕರಿಂದ 'ಚಕ್‌ದೇ ಇಂಡಿಯಾ' ಎಂಬ ಘೋಷವಾಕ್ಯ. ಚಿತ್ರ ಸಾಧಿಸಿರುವ ಯಶಸ್ಸಿಗೆ ಇದೊಂದು ಸಾಕ್ಷಿ.

ತನ್ನ ಹೆಸರಿಗೆ ಅಂಟಿದ್ದ ಕಳಂಕ ತೊಳೆದುಕೊಳ್ಳಲು ಏಳುವರ್ಷಗಳ ನಂತರ ವಿಶ್ವಕಪ್‌ಗಾಗಿ ಪ್ರತಿಸ್ಪರ್ಧಿಸುವ ಭಾರತ ತಂಡದ ಕೋಚ್ ಆಗಿಬರುವ ಕಬೀರ್‌ಖಾನ್. ನಾಯಕಿಯರೊಂದಿಗೆ

ಮರ ಸುತ್ತುವುದಿಲ್ಲ, ಹಾಡುತ್ತಾ ಆಸ್ಟ್ರೇಲಿಯಾದ ಸ್ಮಾರಕಗಳ ಸುತ್ತ ಭಾವುಕನಾಗಿ ತಿರುಗುವುದಿಲ್ಲ, ಕಣ್ಣೀರು ಸುರಿಸುವುದಿಲ್ಲ. ನುಣ್ಣಗೆ ಶೇವ್ ಮಾಡಿ ಚಾಕ್‌ಲೇಟ್ ಹೀರೋ ಥರ ಕಾಣಿಸುವುದಿಲ್ಲ. ವಿಲನ್‌ನನ್ನೂ ಬಡಿದು ಹಾಕುವುದಿಲ್ಲ. ಬದಲಿಗೆ ಹಾಕಿ ಮೈದಾನದ ಅಂಚಿನಲ್ಲಿ ನಿಂತು ತನ್ನ ತಂಡದ ಹುಡುಗಿಯರೇ ಎಲ್ಲರ ಕೇಂದ್ರಬಿಂದುವಾಗುವಂತೆ ಮಾಡುತ್ತಾನೆ.

ಅಷ್ಟೇ ಅಲ್ಲ, ಎಲ್ಲ ಹೊಸ ಮುಖಗಳೇ ಇರುವ ಕಲಾವಿದರ ತಂಡವೊಂದು 'ಮಹಿಳಾಪರ' ಸಂದೇಶ ಹೊತ್ತು ಚಿತ್ರದಲ್ಲಿ ಹಾಕಿ ಆಟಗಾರ್ತಿಯರಾಗಿ ಕಾಣಿಸಿಕೊಳ್ಳುತ್ತಾರೆ. ಶಾರುಖ್‌ಖಾನ್ ಹೊರತಾಗಿ ಒಂದೇ ಒಂದು ಪರಿಚಿತ ಮುಖವೂ ಚಿತ್ರದಲ್ಲಿಲ್ಲ ಎನ್ನುವುದೇ 'ಚಕ್‌ದೇ' ಹೆಗ್ಗಳಿಕೆ.

ಈ ಚಿತ್ರಕ್ಕೆ ಕಥೆ ರಚಿಸಲು ಚಿತ್ರಕಥಾ ಲೇಖಕ ಜಯದೀಪ್ ಸಾಹ್ನಿಗೆ ಪ್ರೇರಣೆ ಕೊಟ್ಟಿದ್ದು ವೃತ್ತಪತ್ರಿಕೆಯೊಂದರ ಕ್ರೀಡಾಪುಟದಲ್ಲಿ ಪ್ರಕಟವಾದ ಒಂದು ಪುಟ್ಟ ವರದಿ. 'ಮಹಿಳಾ ಹಾಕಿ ತಂಡವೊಂದು ಟೂರ್ನಿಯಲ್ಲಿ ಗೆಲುವು ಸಾಧಿಸಿತು' ಎನ್ನುವುದು ಆ ಇಡೀ ವರದಿಯ ಸಾರಾಂಶ. ಇದನ್ನು ಆಧರಿಸಿಯೇ ಚಿತ್ರಕಥೆ ರಚಿತವಾದದ್ದು. ಈ ಹಿನ್ನೆಲೆಯಲ್ಲಿ ನೋಡಿದರೆ ಚಿತ್ರದಲ್ಲಿ ಕಲಾವಿದರ ಸಾಧನೆ, ನಿರ್ದೇಶಕನ ಪ್ರಯತ್ನಕ್ಕೆ ನೀಡುವ ಕ್ರೆಡಿಟ್ಟನ್ನು ಕಥೆ, ಚಿತ್ರ ಕಥೆ, ತಾರಾಗಣವನ್ನು ಆಯ್ಕೆ ಮಾಡಿದ ಕ್ಯಾಸ್ಟಿಂಗ್ ನಿರ್ದೇಶಕನಿಗೂ ಹಂಚಬೇಕಾಗುತ್ತದೆ.

ಚಿತ್ರವನ್ನು ಹಾಕಿ ಆಟದ ಗಂಧ-ಗಾಳಿ ತಿಳಿಯದವರೂ ಕೂಡ ಅನುಭವಿಸಿ, ಆನಂದಿಸಬಹುದು. ಏಕೆಂದರೆ ಇದರಲ್ಲಿ ಆಟಕ್ಕಿಂತ ಮುಖ್ಯವಾಗುವುದು ದೇಶಪ್ರೇಮ. ಆ ಹದಿಹರೆಯದ ಬಾಲೆಯರಲ್ಲಿ ಬಲಿಯುವ ಛಲ. ಈ ಛಲ ಬಲಿಯಲು ಅಗತ್ಯವಾದ ಸಿದ್ಧತೆ ಚಿತ್ರಕಥೆಯಲ್ಲಿ ಢಾಳಾಗಿ ಕಾಣಿಸುತ್ತದೆ. ನ್ಯಾಷನಲ್ ಕೋಚಿಂಗ್ ಕ್ಯಾಂಪಿಗೆ ಭಾರತದ ಬೇರೆ ಬೇರೆ ಭಾಗಗಳಿಂದ ಬರುವ ಆಟಗಾರ್ತಿಯರಲ್ಲಿ 'ಅಖಂಡ' ಭಾರತದ ಕಲ್ಪನೆ ಮೂಡಿಸಲು ಶಾರುಖ್ ನಡೆಸುವ ಯಂತ್ರ ತಂತ್ರಗಳು ಗಮನಾರ್ಹ. ಕ್ಯಾಂಪ್‌ಗೆ ಬಂದಾಗ ಎಲ್ಲ ಆಟಗಾರ್ತಿಯರು ತಾವು ಪ್ರತಿನಿಧಿಸುವ ಪ್ರದೇಶಗಳ ಹೆಸರನ್ನು ಹೇಳಿದಾಗ ಶಾರುಖ್ ಅವರನ್ನು ಅನರ್ಹಗೊಳಿಸುತ್ತಾನೆ. ಆದರೆ ವಿದ್ಯಾ ಶರ್ಮ ತಾನು ಪ್ರತಿನಿಧಿಸುವುದು 'ಇಂಡಿಯಾ' ಎಂದಾಗ ಆಕೆ ಮಾತ್ರ ಅರ್ಹತೆ ಗಳಿಸುತ್ತಾಳೆ. ಈ ರೀತಿ ನಿರ್ದೇಶಕ ಶಿಮಿತ್ ಅಮೀನ್ 'ಮುಝೆ ಸಿರ್ಫ್ ಏಕ್ ಮುಲ್ಕ್ ಕಾ ನಾಮ್ ಸುನಾಯಿ ದೇತಾ ಹೈ; ಇಂಡಿಯಾ' ಎಂದು ಶಾರುಖ್ ಕೈಯಲ್ಲಿ ಹೇಳಿಸುವ ಮೂಲಕ ಪ್ರೇಕ್ಷಕರ ಮೆಚ್ಚುಗೆಗಳಿಸುತ್ತಾನೆ.

ಈ ಚಿತ್ರ ಕುರಿತು ಮಾತನಾಡುವಾಗ ನನ್ನ ಗೆಳೆಯನೊಬ್ಬ ಕೇಳಿದ. "ಅಂತಿಮವಾಗಿ ಭಾರತ ತಂಡ ಗೆದ್ದೇಗೆಲ್ಲುತ್ತದೆ ಎಂದು ಗೊತ್ತಿರುವಾಗ ಅದರಲ್ಲಿ ಥ್ರಿಲ್ ಏನಿರತ್ತೆ?".

ನಿಜ. 'ಲಗಾನ್' ಚಿತ್ರದಲ್ಲಿ ಹಳ್ಳಿಯ ತಂಡವೊಂದು ಪ್ರಬಲ ಆಂಗ್ಲ ತಂಡದೆದುರು ಗೆಲುವು ಸಾಧಿಸುತ್ತದೆ ಎಂಬುದು ನಮಗೆ ಚಿತ್ರದ ಆರಂಭದಲ್ಲೇ ಗೊತ್ತಿರುತ್ತದೆ. 'ಇಕ್ಬಾಲ್'ನಲ್ಲಿ ಇಕ್ಬಾಲ್ ಭಾರತ ತಂಡಕ್ಕೆ ಆಯ್ಕೆಯಾಗಿಯೇ ಆಗುತ್ತಾನೆ ಎಂಬ ಅಗತ್ಯದ ಸತ್ಯಕೂಡ ನಮಗೆ ಗೊತ್ತಿರುತ್ತದೆ. (ನೂರಕ್ಕೆ ತೊಂಬತ್ತೊಂಬತ್ತರಷ್ಟು ಚಿತ್ರದಲ್ಲಿ ನಾಯಕನಿಗೆ ಗೆಲುವು ಶತಃಸಿದ್ಧ ಎಂಬುದು ಗೊತ್ತಿರುವಂತೆ) ಆದರೆ ಗೆಲುವಿನ ದಾರಿಯಲ್ಲಿ ಹೊಳೆಯಿಸುವ ಸತ್ಯಗಳು, ಹುಟ್ಟಿಸುವ ಹೊಸ ಆಲೋಚನೆಗಳು ಕೂಡ ಅಷ್ಟೇ ಮುಖ್ಯ. ಸಾಮಾನ್ಯವಾಗಿ ಕಮರ್ಷಿಯಲ್ ನೆಲೆಯಾಧಾರಿತ ಚಿತ್ರವೊಂದು ಪ್ರತ್ಯೇಕವಾಗಿ ನಿಂತುಕೊಳ್ಳುವುದು ಈ ರೀತಿಯ ಕಥೆ ಹೇಳುವಿಕೆಯಲ್ಲಿ ಎಂಬುದು ನನ್ನ ನಂಬಿಕೆ.

ಅಪರಿಚಿತ ಮುಖಗಳನ್ನು ಪರಿಚಯಿಸುವ ಮೂಲಕ 'ಚಕ್‌ದೇ...' ನಮ್ಮೆದುರು ಹೊಸ ಆಯಾಮವೊಂದನ್ನು ತೆರೆದಿಡುತ್ತದೆ ಎಂದು ಈ ಮೊದಲೇ ಪ್ರಸ್ತಾಪಿಸಿದ್ದೇನೆ. ಅಪರಿಚಿತ ಮುಖಗಳು ಪರಿಚಿತ ಮುಖಗಳಂತೆ ನಿರೀಕ್ಷೆಗಳನ್ನೂ ಹುಟ್ಟಿಸುವುದಿಲ್ಲ. ಆದರೆ ಚಿತ್ರ ಬಿಚ್ಚಿಕೊಳ್ಳುತ್ತಾ ಹೋದಂತೆ ಈ ಅಪರಿಚಿತ ಮುಖಗಳು ನಮಗೆ ಬಹುಕಾಲದಿಂದ ಪರಿಚಿತವೇನೋ ಎಂಬ ಭಾವನೆಯನ್ನು ಹುಟ್ಟಿಸಿ, ಅವು ತಮ್ಮ ಮನುಷ್ಯ ಸಹಜ ವರ್ತನೆಯಿಂದ ನಮಗೆ ಆತ್ಮೀಯವಾಗಿಬಿಡುತ್ತವೆ. ಒಂದು ಹಂತದಲ್ಲಿ ತನಗೆ ನಾಯಕಿ ಸ್ಥಾನ ದೊರೆಯಲಿಲ್ಲವೆಂಬ ಈರ್ಷ್ಯೆಯಿಂದ ಶಾರುಖ್ ಬಳಿಗೆ ಬರುವ ಮುಂಬೈ ತಂಡದ ಎಲ್ಲ ಸೊಫೆಸ್ಟಿಕೇಷನ್‌ನ ಪ್ರತಿನಿಧಿಯಂತಿರುವ ಬಿಂದಿಯಾ ನಾಯಕ್ "ನನ್ನಲ್ಲಿ ಇಲ್ಲದಿರುವ ಅಂಥದ್ದು ಅವಳಲ್ಲಿ ಏನಿದೆ? ಅವಳು ಕೊಡಬಹುದಾದ್ದನ್ನು ನಾನೂ ಕೊಡಬಲ್ಲೆ" ಎಂದು ಬ್ಲೇಸರ್ ಕಳಚುವ ಸಂದರ್ಭದಲ್ಲಿ ಶಾರುಖ್ ಮನಸ್ಸಿನಲ್ಲಿ ಹುಟ್ಟುವ ಅಸಹ್ಯದ ಭಾವನೆಯನ್ನು ನಿರ್ದೇಶಕ ಅಮೀನ್, ಬ್ಲೇಸರ್‌ನ ಜಿಪ್ ಮೇಲೆಳೆಯುವುದರ ಮೂಲಕ ಮನೋಜ್ಞವಾಗಿ ತಲುಪಿಸುತ್ತಾ, ಈರ್ಷ್ಯೆ ತಲುಪಬಹುದಾದ ಎತ್ತರದ ಪರಿಚಯ ಮಾಡಿಸುತ್ತಾನೆ. ಶಾರುಖ್ ಖಾನ್ ಕೂಡ ತನ್ನ ಶಕ್ತಿಯಿಂದ ಪಾತ್ರಕ್ಕೆ ನ್ಯಾಯ ದೊರಕಿಸಿದ್ದಾನೆ. ಆ ಪಾತ್ರ ಆತನಿಗಾಗಿಯೇ ಸೃಷ್ಟಿಸಿದ್ದೇನೋ ಎನ್ನುವಂತಿದೆ. ನಿಜ, ಶಾರುಖ್ ಖಾನ್ ಪ್ರೇಕ್ಷಕರ ಮೆಚ್ಚಿನ ನಟ. ಆದರೆ ಚಿತ್ರದಲ್ಲಿ ಪ್ರೇಕ್ಷಕರಿಗೆ ಅವರಿಗೆ ಬೇಕಾದ ಶಾರುಖ್ ದೊರೆಯುವುದಿಲ್ಲ. ಅಲ್ಲಿ ನಮಗೆ ಕಾಣಿಸುವುದು 'ಸ್ವದೇಸ್' ಚಿತ್ರದ ಮೋಹನ್ ಭಾರ್ಗವ್. ಇಲ್ಲೆ ಗೆಲುವು ಕೂಡ ಇದೆ.

'ಚಕ್‌ದೇ...' ಚಿತ್ರದಲ್ಲಿ ಪ್ರೇಕ್ಷಕರನ್ನು ತಟ್ಟುವ ಹಾಗೂ ಚಿಂತಿಸುವಂತೆ ಮಾಡುವ ಹಲವಾರು ಸಂಗತಿಗಳಿವೆ. ಪಂಜಾಬಿ ಹುಡುಗಿ ಬಲಬೀರ್‌ಳ ಒರಟುತನ. ಬಂಗಾರದಂಥ ಮನಸ್ಸಿನ ಈ ಹುಡುಗಿ ತಮ್ಮನ್ನು ಕೆಣಕಿದ ಹುಡುಗರ ಗುಂಪಿನ ಮೇಲೆ ತಾನು ಹೆಣ್ಣೆಂಬುದನ್ನು ಮರೆತು ಎರಗುವ ಸಂದರ್ಭ. ಈ ಸಂದರ್ಭವನ್ನೇ ಆಟಗಾರ್ತಿಯರ ಶಕ್ತಿಯಾಗಿ ಮಾರ್ಪಡಿಸುವ ಕೋಚ್ ಶಾರುಖ್‌ನ ಜಾಣ್ಮೆ ಗಮನ ಸೆಳೆಯುತ್ತದೆ. ಆಟಗಾರ್ತಿಯರ ಹೋರಾಟವನ್ನು ದೂರದಿಂದ ಮೌನವಾಗಿ ನಿರುಕಿಸುತ್ತಾ ತಾನು ಅದರಲ್ಲಿ ಪಾಲ್ಗೊಳ್ಳದೆ, ಒಂದು ಹಂತದಲ್ಲಿ ಹುಡುಗನೊಬ್ಬ ಆಟಗಾರ್ತಿಯೊಬ್ಬಳ ಮೇಲೆ ಹಿಂದಿನಿಂದ ಅಟ್ಯಾಕ್ ಮಾಡಲು ಪ್ರಯತ್ನಿಸಿದಾಗ 'ಗಂಡಾದರೆ ಎದುರಿನಿಂದ ಎದುರಿಸು' ಎನ್ನುವ ಸಣ್ಣ ಝಲಕ್, ಸಿಡುಕುಮೋರೆಯ ಮಣಿಪುರಿ ಬಾಲೆ ಪೆನಾಲ್ಟಿ ಕಾರ್ನರ್ ಸ್ಪೆಶಲಿಸ್ಟ್ ಆಗಿ ರೂಪುಗೊಳ್ಳುವುದು, ಅತ್ಯಾಧುನಿಕ ಹಾಕಿ ಕಿಟ್ ದೊರೆತಾಗ ಆಟಗಾರ್ತಿಯರ ಮುಖಗಳು ಅರಳುವ ಪರಿ.



ಚಿತ್ರದ ಆರಂಭದಲ್ಲಿ ಆಟಗಾರ್ತಿಯರ ಮೂಲಕ ನಮ್ಮಲ್ಲಿ ಬೇರು ಬಿಟ್ಟಿರುವ ಸಾಮಾಜಿಕ, ಆರ್ಥಿಕ, ಪ್ರಾದೇಶಿಕ ಭಿನ್ನತೆಗಳು – ಮೇಲು ಕೀಳನ್ನು ತೆರೆದಿಡುವ ರೀತಿ, ಸೊಫೆಸ್ಟಿಕೇಟೆಡ್ ಜಗತ್ತು, ನಾಗರಿಕತೆಯಿಂದ ದೂರವಿರುವವರನ್ನು ನೋಡುವ ನೋಟ... ಹೀಗೆ ಹತ್ತು ಹಲವು ಸಂಗತಿಗಳನ್ನು ಪಟ್ಟಿ ಮಾಡುತ್ತಾ ಹೋಗಬಹುದು.

ಹಾಗೆ ನೋಡಿದರೆ ಚಿತ್ರ ಭಾರತೀಯ ಮಹಿಳಾ ಹಾಕಿಗೆ ಸಂಬಂಧಿಸಿದ ಕೆಲವರನ್ನು ನೇರವಾಗಿ ಟೀಕೆ ಮಾಡಲು ಹಿಂದೆ ಮುಂದೆ ನೋಡುವುದಿಲ್ಲ. ಆದರಲ್ಲೂ ಹೆಣ್ಣೆಂದರೆ ಮಕ್ಕಳನ್ನು ಹೆರುವ ಯಂತ್ರ ಎಂಬಂತೆ ಮಾತನಾಡುವವರನ್ನು ಮೌನವಾಗಿಸುವ ರೀತಿ ಇಲ್ಲಿ ಗಮನಾರ್ಹ. ಕ್ರಿಕೆಟ್‌ವೊಂದೇ ತನ್ನ ಸಾಧನೆ ಎನ್ನುವ ತನ್ನ ಕ್ರಿಕೆಟಿಗ ಫಿಯಾನ್ಸಿಗೆ ತನ್ನ ಆಟದ ಮೂಲಕ ಉತ್ತರಿಸಿ ಅವನನ್ನು ತಿರಸ್ಕರಿಸುವ ಪ್ರೀತಿಸಭರ್‌ವ್ವಾಲ್, ಮನೆಯವರ ಮದುವೆ ಪ್ರಸ್ತಾಪಕ್ಕಿಂತಲೂ ಬೇರೇನನ್ನಾದರೂ ಸಾಧಿಸಬೇಕೆಂಬ ವಿದ್ಯಾಶರ್ಮಳ ಛಲ... ಹೀಗೆ ಹೆಣ್ಣು ಹೆಣ್ಣೆಂದು ಹೀಗಳೆಯುವವರಿಗೆ ಇಲ್ಲಿ ಉತ್ತರಗಳ ಸರಮಾಲೆಯೇ ಇದೆ.

'ಚಕ್‌ದೇ' ಇಂದಿನ ಸಂದರ್ಭದಲ್ಲಿ ಹೇಳಲೇ ಬೇಕಿರುವ ಕಥೆ. ಮಹಿಳೆ ತನ್ನ ಅಸ್ತಿತ್ವದ ಉಳಿಕೆಗಾಗಿ ನಡೆಸುತ್ತಿರುವ ಹೋರಾಟವು ಕಾಲದ ಅವಶ್ಯಕತೆ. ದೇಶ ತನ್ನ 60ನೇ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳುತ್ತಿರುವ ಸಂದರ್ಭದಲ್ಲೂ ಆಸಿಡ್‌ದಾಳಿಗೆ ತುತ್ತಾಗುತ್ತಿರುವ, ವರದಕ್ಷಿಣೆಗಾಗಿ ಸಾವನ್ನಪ್ಪುತ್ತಿರುವ, ಮದುವೆಯಾಗಿಯೂ ಗಂಡನಿಂದ ಶೋಷಣೆಗೊಳಗಾಗುತ್ತಿರುವ, ರಾಕ್ಷಸ ವ್ಯಕ್ತಿತ್ವದವರ ಲೈಂಗಿಕ ದಾಹಕ್ಕೆ ತುತ್ತಾಗುತ್ತಿರುವ, ಕೆಲಸ ಮಾಡುವ ಸ್ಥಳಗಳಲ್ಲಿ ಗಂಡಸರ ಲೈಂಗಿಕ ಕಿರುಕುಳ ಸಹಿಸಿಕೊಳ್ಳುತ್ತಿರುವ ಮಹಿಳೆಯರಿಗಾಗಿ ಈ ಕಥೆ. ಏಕೆಂದರೆ ಕ್ರೀಡಾಕ್ಷೇತ್ರದ ಮಹಿಳೆಯರ ಬಗ್ಗೆ ಗಂಡಸರಿಗಿರುವ ಪೂರ್ವಾಗ್ರಹ ಅಲ್ಪಸಂಖ್ಯಾತರ ಬಗ್ಗೆ ಬಹುಸಂಖ್ಯಾತರಿಗಿರುವ ಅಸಹನೆ... ಎಲ್ಲವನ್ನೂ ಈ ಚಿತ್ರ ಈರುಳ್ಳಿಯ ಸಿಪ್ಪೆ ಸುಲಿದಂತೆ ನಮ್ಮ ಮುಂದೆ ಬಿಚ್ಚಿಡುತ್ತದೆ. ಒಂದು ಸ್ತರದಲ್ಲಿ ಅಲ್ಪ ಸಂಖ್ಯಾತರ ದೇಶಪ್ರೇಮದ 'ಅಗ್ನಿದಿವ್ಯ'ದಂತೆ ಕಾಣಿಸುತ್ತದೆ.

ಚಿತ್ರದ ಒಂದು ಹಂತದಲ್ಲಿ ಆಟಗಾರ್ತಿಯರಲ್ಲಿನ ಭಿನ್ನಾಭಿಪ್ರಾಯ, ಭೇದಭಾವ, ಮೇಲುಕೀಳು ಭಾವನೆಗಳನ್ನು ತರಬೇತಿಯ ಸಂದರ್ಭದಲ್ಲಿ ಕೋಚ್ ಕಬೀರ್‌ಖಾನ್ ತನ್ನ ಕಠಿಣ ನಿಲುವಿನಿಂದ ಸರಿಪಡಿಸಲು ಯತ್ನಿಸಿದಾಗ ಅವನ ಸಹಾಯಕಿ "ಪರಿಸ್ಥಿತಿ ಈಗ ಹತೋಟಿಗೆ ಬಂದಿದೆ" ಎನ್ನುತ್ತಾಳೆ. ಆಗ ಅವಳಿಗೆ ಉತ್ತರವಾಗಿ ಕೋಚ್ ಶಾರುಖ್ ತನ್ನ ಮುಖದಲ್ಲಿ ಯಾವುದೇ ಬದಲಾವಣೆ ತೋರದೆ ತಂಡದ ಹಾದಿಯನ್ನು ಕಂಡವನಂತೆ "ಪರಿಸ್ಥಿತಿ ಶೀಘ್ರದಲ್ಲಿಯೇ ಕೈ ಮೀರಲಿದೆ" ಎನ್ನುತ್ತಾನೆ.

ನನಗನ್ನಿಸುವಂತೆ ಇದು ಚಿತ್ರದ ಘೋಷವಾಕ್ಯ.

ಇತ್ತೀಚಿನ ದಿನಗಳಲ್ಲಿ ಬಾಲಿವುಡ್‌ನ ಕೆಲವು ಮಂದಿ ಈ ರೀತಿಯ ಸೀಮೋಲ್ಲಂಘನೆ ಹಾಗೂ ರಚಿತ ಸೂತ್ರಗಳ ಉಲ್ಲಂಘನೆಯಲ್ಲಿ ಸತತವಾಗಿ ನಿರತರಾಗಿರುವಂತೆ ಕಾಣಿಸುತ್ತದೆ. 'ರಂಗ್‌ದೇ ಬಸಂತಿ,' 'ಲಗೇ ರಹೋ ಮುನ್ನಾಭಾಯಿ', 'ಖೋಸ್ಲಾ ಕಾ ಘೋಸ್ಲಾ' 'ಭೇಜಾಫ್ರೈ' ಈ ಸಿದ್ಧ ಸೂತ್ರಗಳನ್ನು ಮುರಿದಿರುವುದರ ಸ್ಪಷ್ಟ ನಿದರ್ಶನ. ಈಗ ಬಾಲಿವುಡ್‌ನ ಸಾಂಪ್ರದಾಯಿಕ ನಿಯಮಾವಳಿಗಳನ್ನು ಪುನರ್‌ರಚಿಸುವ ಕಾಲ ಸನ್ನಿಹಿತವಾಗಿರುವಂತೆ ತೋರುತ್ತದೆ. ❑

## ಮದುವೆ? ಆತುರ ಏಕೆ?....

(ಪುಟ 8ರಿಂದ)

ಈ ಸಂತಾನ ನಿಯಂತ್ರಣವನ್ನು ಜಾರಿಗೆ ತರುವು ದಕ್ಕಾಗಿ ಮದುವೆ ವಯಸ್ಸನ್ನು 21 ವರ್ಷಕ್ಕೆ ಏರಿಸಿದರೆ ಮಕ್ಕಳ ಸಂಖ್ಯೆ ಕಡಿಮೆಯಾಗುವುದು ಎನ್ನುವುದು ಬರಿಯ ಕಲ್ಪನೆ. ಬೇಗ ಮದುವೆ ಮಾಡಿಕೊಂಡವರಲ್ಲೂ ಮಕ್ಕಳು ಹೆಚ್ಚಾಗಿಲ್ಲವೆಂಬುದನ್ನು ನಾವೇ ನೋಡಿದ್ದೇವೆ. ಆಗ ಯಾವ ಸಂತಾನ ನಿಯಂತ್ರಣ ಪದ್ಧತಿಯೂ ಇರಲಿಲ್ಲ. ಸಂತಾನ ನಿಯಂತ್ರಣದ ಪ್ರಚಾರ ನಗರವಾಸಿಗಳಿಗೆ ಬೇಕಾಗಿಯೇ ಇಲ್ಲ. ಇದು ತನಗೆ ತಾನೇ ಎಲ್ಲಾ ಕಡೆಯಲ್ಲೂ ಹರಡಿ ಬರುತ್ತಾ ಇದೆ. ಸಂಸಾರದಲ್ಲಿ ಹಣದ ಅಭಾವದಿಂದ, ಹೆಚ್ಚು ಮಕ್ಕಳನ್ನು ಸಾಕಲು ಸಾಧ್ಯವಿಲ್ಲವೆಂದು ಎಲ್ಲರಿಗೂ ಮನದಟ್ಟಾಗುತ್ತಿದೆ. ಮಧ್ಯಮವರ್ಗದವರಿಗೆ ಮತ್ತು ವಿದ್ಯಾವಂತರಿಗೆ ಇದನ್ನು ತಿಳಿಸಬೇಕಾದ ಅಗತ್ಯವೇ ಇರುವುದಿಲ್ಲ. ಇನ್ನು ಕೂಲಿ ಮಾಡಿ ಜೀವಿಸುವವರು ಮತ್ತು ಹಳ್ಳಿ ವಾಸಿಗಳಿಗೆ ಈ ಸಂತಾನ ನಿಯಂತ್ರಣದಲ್ಲಿ ನಂಬಿಕೆ ಬರುವುದಿಲ್ಲ. ಧರ್ಮ, ತಪ್ಪು ತಿಳಿವಳಿಕೆ, ಮೊದಲಾದ ಕಾರಣದಿಂದ ಅದು ಅಲ್ಲಿ ಜಾರಿಗೆ ಬರುವುದು ಬಹಳ ಕಷ್ಟ. ಕೊನೆಯದಾಗಿ ಅವರಿಗೆ ವಿದ್ಯೆ ಇಲ್ಲದಿರುವುದೂ ಒಂದು ಕಾರಣ. ಹೀಗಾಗಿ ಇಂತಹ ಕಾನೂನನ್ನು ಜಾರಿಗೆ ತರುವುದು ಕಷ್ಟ.

ಯಾವ ಕಾನೂನು ಮಾಡಬೇಕಾದರೂ ದೀರ್ಘಯೋಚನೆ ಮಾಡಿ ಸಾರ್ವಜನಿಕರ ಅಭಿಪ್ರಾಯವನ್ನು ಸಂಗ್ರಹಿಸಿ ತೀರ್ಮಾನಕ್ಕೆ ಬರಬೇಕು.

ಹಿಂದೂ ಕೋಡ್ ಬಿಲ್ ಬಂದ ನಂತರ ಎಷ್ಟೋ ಅಸಮಾಧಾನಗಳು ದೇಶದಲ್ಲಿ ಕಂಡುಬರುತ್ತಿವೆ. ಈ ಎಲ್ಲಾ ವಿಷಯಗಳ ಬಗ್ಗೆ ಆಲೋಚನೆ ಮಾಡಿದರೆ ಹೆಣ್ಣುಮಕ್ಕಳಿಗೆ ಇಷ್ಟೇ ವಯಸ್ಸಿಗೆ ಮದುವೆ ಮಾಡಬೇಕೆಂಬ ತೀರ್ಮಾನವು ಬೇಡವೇ ಬೇಡ. ಹಾಗೆ ಒಂದು ವೇಳೆ ಕಾನೂನನ್ನು ತರಲೇಬೇಕೆಂಬ ನಿರ್ಬಂಧವಿದ್ದರೆ 18 ವರ್ಷಗಳವರೆಗೆ ನಿಗದಿಯನ್ನು ತೀರ್ಮಾನ ಮಾಡಬಹುದು.

ಕೊನೆಯದಾಗಿ ಒಂದು ಮಾತು, ಹೆಣ್ಣುಮಕ್ಕಳ ಮದುವೆಗೆ ಮಾತ್ರ ಈ ವಯೋ ನಿರ್ಬಂಧವೇಕೆ? ಗಂಡು ಮಕ್ಕಳಿಗೆ ಬೇಡವೇ? ಹೆಣ್ಣು ಗಂಡುಗಳ ಸರಿಸಮಾನತೆಯ ಭಾವನೆಯ ಈ ಯುಗದಲ್ಲಿ ಹೆಣ್ಣುಮಕ್ಕಳ ವಯಸ್ಸನ್ನು ಮಾತ್ರ ಕಾಲಕಾಲಕ್ಕೆ ಕಾನೂನಿಗೆ ಒಳಪಡಿಸಿ, ಗಂಡುಮಕ್ಕಳ ವಿವಾಹಕ್ಕೆ ವಯಸ್ಸಿನ ನಿರ್ಬಂಧವನ್ನು ಹಾಕದಿರುವುದು ಸರಿಯಲ್ಲವೆಂದು ನನ್ನ ಭಾವನೆ.

ಈಗಿನ ಕಾಲದಲ್ಲಿ ಹೆಣ್ಣುಮಕ್ಕಳಿಗೆ 21 ವಯಸ್ಸಿಗೆ ಕಡಿಮೆಯಾಗಿ ಮದುವೆ ಮಾಡಬಾರದು ಎಂಬ ಸೂಚನೆ ಆಲೋಚನೆಗೆ ಅರ್ಹವಾದುದು. ಕಾಲಸ್ಥಿತಿ ತ್ವರಿತವಾಗಿ ನಾಗಾಲೋಟದಿಂದ ಬದಲಾವಣೆಯಾಗುತ್ತಿದೆ. ಆದ್ದರಿಂದ "ಅಪ್ಪ ಹಾಕಿದ ಆಲದ ಮರ" ಎಂಬಂತೆ ಹಿಂದಿನ ಸಂಪ್ರದಾಯಗಳನ್ನೇ ನಡೆಸಿಕೊಂಡು ಬರಲು ಆಗುವುದಿಲ್ಲ. ಅದು ಸಾಧ್ಯವೂ ಇಲ್ಲ.

ಈಗ 21 ವರ್ಷ ಕಡಿಮೆ ವಯಸ್ಸಿನ ಹೆಣ್ಣುಮಕ್ಕಳಿಗೆ ಮದುವೆ ಮಾಡಬಾರದೆಂಬ ಕಾನೂನು ಮಾಡಿದರೆ ಇದಕ್ಕೂ ಪ್ರತಿಭಟನೆ ಬರಬಹುದು. ಏತಕ್ಕೆಂದರೆ ಇದು ಸಂಪ್ರದಾಯದ ವಿಷಯ.

ನಮ್ಮ ಸಮಾಜ ಕಾಲಕಾಲಕ್ಕೆ ಅನುಗುಣವಾಗಿ ಸಂಪ್ರದಾಯಗಳನ್ನು ಬದಲಾಯಿಸುತ್ತಲೇ ಹೋಗುತ್ತಿದೆ. ಯಾವ ನಿರ್ಬಂಧವೂ ಇಲ್ಲದೆ ಇದು ತನಗೆ ತಾನೇ ಆಗುತ್ತಿದೆ. ಹಿಂದೆ ಋತುಮತಿಯಾದ ಹೆಣ್ಣುಮಕ್ಕಳ ವಿವಾಹವೆಂದರೆ ಅನೇಕರು ಹೆದರುತ್ತಿದ್ದರು. ಈಗ ತನಗೆ ತಾನೇ ಆ ಪದ್ಧತಿ ಮರೆಯಾಗುತ್ತಿದೆ.

('ಸ್ಮರಣೀಯ ಚೇತನ....' ಕೃತಿಯಿಂದ)

❑

# 'ಮಹಿಳೆ ಮತ್ತು ಸಾಹಿತ್ಯ' ಕುರಿತು....

## ರಾಗೌ ಟ್ರಸ್ಟ್ – ಪ್ರಶಸ್ತಿ ಪ್ರದಾನ ಸಮಾರಂಭ



*2008 ಜುಲೈ 24ರ ಸಂಜೆ ಮೈಸೂರಿನ ಕಲಾಮಂದಿರದಲ್ಲಿ ಶ್ರೀಮತಿ ಯಶೋದಾ ರಾಗೌ ಟ್ರಸ್ಟ್ ಪ್ರಶಸ್ತಿ ಪ್ರದಾನ ಹಾಗೂ ಉಪನ್ಯಾಸವನ್ನು ಕವಿತಾ ಅವರ ಹುಟ್ಟು ಹಬ್ಬದ ನೆನಪಿನಲ್ಲಿ ಹಮ್ಮಿಕೊಂಡಿತ್ತು.*

*ಸಮಾರಂಭದಲ್ಲಿ ಪ್ರೊ. ಪ್ರಧಾನ್‌ಗುರುದತ್ತ, ಡಾ॥ ಸಿದ್ಧಲಿಂಗಯ್ಯ ಡಾ॥ ಬಿ.ಎನ್. ಸುಮಿತ್ರಾಬಾಯಿ, ಮೇಲುಕೋಟೆಯ ಶಾಸಕ ಸಿ.ಎಸ್. ಪುಟ್ಟರಾಜುರವರು ಭಾಗವಹಿಸಿದ್ದರು. ಡಾ॥ ಬಿ.ಎನ್. ಸುಮಿತ್ರಾಬಾಯಿ ಯವರ 'ಮಹಿಳೆ ಮತ್ತು ಸಾಹಿತ್ಯ' ಹೊತ್ತಿಗೆಯನ್ನು ಈ ಸಮಾರಂಭದಲ್ಲಿ ಬಿಡುಗಡೆಗೊಳಿಸಲಾಯಿತು. ಹಾಗೆಯೇ ಕಳೆದ 10 ವರ್ಷಗಳಿಂದ ಪ್ರಕಟಗೊಂಡಿರುವ ಎಲ್ಲಾ ಹೊತ್ತಿಗೆಗಳನ್ನು ಸಂಕಲಿಸಿ ಡಾ॥ ರಾಗೌರವರು ಸಂಪಾದಿಸಿರುವ 'ಮಹಿಳಾ ಅಧ್ಯಯನದ ಆಯಾಮಗಳು' ಸಂಪುಟವನ್ನು ಸಹ ಇದೇ ಸಂದರ್ಭದಲ್ಲಿ ಬಿಡುಗಡೆಗೊಳಿಸಿದ್ದು ವಿಶೇಷವಾಗಿತ್ತು. ಪ್ರಶಸ್ತಿಗೆ ಭಾಜನರಾದ ಡಾ॥ ವಿಜಯಾದಬ್ಬೆಯವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಡಾ॥ ಸುಮಿತ್ರಾಬಾಯಿ ಯವರು 'ಮಹಿಳೆ ಮತ್ತು ಸಾಹಿತ್ಯ' ಕುರಿತು ಮಾತನಾಡಿದರು.*

ಡಾ॥ ಸುಮಿತ್ರಾಬಾಯಿಯವರು ಈ ಹೊತ್ತಿಗೆಯಲ್ಲಿ ಹೆಣ್ಣಿನ ಸಮಾನ ದುಃಖಿತ್ವದ ಅಭಿವ್ಯಕ್ತಿಗಳು ವಿವಿಧ ರೀತಿಯಲ್ಲಿ ಕಾಣಿಸಿಕೊಂಡ ರೀತಿ, ಮೌಖಿಕ ಪರಂಪರೆ ಯೊಳಗೆ ಆಕೆ ವ್ಯಕ್ತಪಡಿಸಿರುವ ಸಂಕಟ, ದಿಟ್ಟತನಗಳು – ಪಿತೃಪ್ರಧಾನ ಸಮಾಜದ ಕೇಂದ್ರದಿಂದ ಅಂಚಿಗೆ ಒತ್ತರಿಸಲ್ಪಟ್ಟ ನೆಲೆಗಳಿಂದ ಹೊರಬಂದ ಮಹಿಳಾ ಸಾಹಿತ್ಯದ ಉಪಸಂಸ್ಕೃತಿಯ ವೈಲಕ್ಷಣ್ಯಗಳಿಂದ ಹುಟ್ಟಿದ ಅಧ್ಯಯನವನ್ನು ಕುರಿತು ಚರ್ಚಿಸಿದ್ದಾರೆ. ಮಹಿಳಾನುಭವ ಬಹುರೂಪಿಯದ್ದಾಗಿದೆ ಎನ್ನುವ ಡಾ॥ ಬಿ.ಎನ್.ಎಸ್. ಬಂಡವಾಳಶಾಹಿ, ಕೃಷಿ ಪ್ರಧಾನ ವ್ಯವಸ್ಥೆಯ ಅಡಿಯಲ್ಲಿರುವ ಮಹಿಳೆಯರ ಸಾಂಸ್ಕೃತಿಕ ಅಭಿವ್ಯಕ್ತಿಗಳು ಭಿನ್ನವಾಗಿರುವುದನ್ನು ವಿವರಿಸುತ್ತಾರೆ.

ಮಹಿಳಾನುಭವ ಸಾರ್ವತ್ರಿಕವಾದದ್ದು ಹಾಗೂ ವೈಯಕ್ತಿಕವೇ ರಾಜಕೀಯದ್ದೂ ಆಗಿರುತ್ತದೆ ಎಂಬ ಪರಿಕಲ್ಪನೆಗಳ ವೈರುಧ್ಯಗಳನ್ನು ಲೇಖಕಿ ಗುರುತಿಸು ತ್ತಾರೆ. ವೈಯಕ್ತಿಕ ರಾಜಕಾರಣ (Personal is political) ಎಂಬುದನ್ನು ಜ್ಞಾನದ ವಸ್ತುನಿಷ್ಠ ರೂಪಕ್ಕೆ ಬದಲಾಗಿ ವ್ಯಕ್ತಿನಿಷ್ಠ ಅನುಭವದಿಂದ ಪಡೆಯುವ ಜ್ಞಾನವೊಂದೇ ಅರ್ಹವಾದ ಜ್ಞಾನ ಎಂದು ಪ್ರತಿಪಾದಿಸುತ್ತದೆ ಎಂದು ಅರ್ಥೈಸುವ ಇವರು ಅದರ ಮಿತಿಯನ್ನೂ ವಿವರಿಸುತ್ತಾರೆ.



**ಮಹಿಳೆ ಮತ್ತು ಸಾಹಿತ್ಯ**
ಪ್ರ : ಯಶೋದಾ ರಾಗೌ ಟ್ರಸ್ಟ್
ಬೆಲೆ : ರೂ. 50/-

ಕೇಟ್ ಮಿಲೆಟರ್ ಅವರ ಲಿಂಗರಾಜಕಾರಣ, ಸ್ತ್ರೀ ಸೋದರಿಕೆ ತತ್ವದ ಬಗ್ಗೆ ವಿವರಿಸುತ್ತಾ, ಮಹಿಳಾ ಅಧ್ಯಯನವು ಸ್ತ್ರೀ ದೃಷ್ಟಿಕೋನದಿಂದ ಚರಿತ್ರೆಯ ಶೋಧನೆಗೆ ಇಂಬುಕೊಟ್ಟುದನ್ನು ವಿವರಿಸುತ್ತದೆ ಮತ್ತು ಈ ವಿಮರ್ಶೆ ಪ್ರತಿಷ್ಠಿತ ಮೇರು ಕೃತಿಗಳ ಸತ್ಯ ದರ್ಶನಗಳನ್ನು ಪ್ರಶ್ನಿಸಿದುದಲ್ಲದೇ, ಹೆಣ್ಣಿನ ಮಾದರಿಗಳಲ್ಲಿ ಇತ್ಯಾತ್ಮಕ ಅನುಭವ ಚಿತ್ರಣ ಗುರುತಿಸಿ, ಹೆಣ್ಣಿನ ಅಸ್ತಿತ್ವಕ್ಕೆ ಬೆಲೆ ಇಲ್ಲದಿರುವ ಚಿಂತನೆಗಳನ್ನು ಹೊರಗೆಡುವುತ್ತದೆ. ಅಲ್ಲದೇ ಸ್ತ್ರೀ ಬರಹಗಾರರಲ್ಲಿ ಯಾವ ಚಿಂತನೆ ಮೂಡಿವೆ ಎನ್ನುವತ್ತ ದೃಷ್ಟಿ ಹಾಯಿಸುವ ಹಂತದಲ್ಲಿ ಸ್ತ್ರೀ ಸಾಹಿತ್ಯ ವಿಮರ್ಶೆ ಬೆಳೆಯಿತು ಎಂದು ಲೇಖಕಿ ವಿವರಿಸುತ್ತಾರೆ.

ಕನ್ನಡ ಸಾಹಿತ್ಯದ ಪ್ರಾಚೀನ ಲೇಖಕಿಯರ ಪುನರ್ ಶೋಧನೆ, ನಷ್ಟವಾಗಿ ಹೋದ ಮಹಿಳಾ ಸಾಹಿತ್ಯ ಚರಿತ್ರೆಯ ಹುಡುಕಾಟ ಇವುಗಳ ಬಗ್ಗೆ ಲೇಖಕಿ ಈ ಹೊತ್ತಿಗೆಯಲ್ಲಿ ದೀರ್ಘವಾಗಿ ಚರ್ಚಿಸಿದ್ದಾರೆ. ಈ ಸಂಸ್ಕೃತಿಯ ನಿಜವಾದ ವಿಮರ್ಶೆ ಹುಟ್ಟಿದ್ದು ಮಹಿಳಾ ಚಳವಳಿಯ ಮೂಲಕವಾಗಿಯೇ ಎಂಬುದನ್ನು ಸಹ ಇವರು ಗುರುತಿಸುತ್ತಾರೆ, ಅನೇಕ ರೀತಿಯ ದಮನಕಾರಿ ರಚನಾ ಶ್ರೇಣಿಗಳನ್ನು ಮಹಿಳಾ ಚಳವಳಿ ಚರ್ಚೆಗೆ ತಂದ ಹಿನ್ನೆಲೆಯಲ್ಲಿಯೇ ಮಹಿಳಾ ಸಾಹಿತ್ಯದ ಅಧ್ಯಯನದ ಬಳಿಗೆ ಭಿನ್ನ ಭಿನ್ನ ಸಂಸ್ಕೃತಿಯ ಅಭಿವ್ಯಕ್ತಿ ಮಾದರಿಗಳು ಅವಕಾಶ ಪಡೆದುಕೊಂಡವು ಎಂಬುದನ್ನು ಗುರುತಿಸುತ್ತಾರೆ. ಮಹಿಳಾ ಸಾಹಿತ್ಯದ ಹೊಸ ಚರಿತ್ರೆಗೆ ಇವು ಹೇಗೆ ಇಂಬುಕೊಟ್ಟವು ಎಂಬುದನ್ನು ಕೂಡಾ ಲೇಖಕಿ ಸುದೀರ್ಘವಾಗಿ ಚರ್ಚಿಸುತ್ತಾರೆ.

ಮಹಿಳಾಸಾಹಿತ್ಯ ಅಧ್ಯಯನದಲ್ಲಿ ಇಂದು ಯಾವ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾಗಿದೆ ಎಂಬುದರ ಮೇಲೆಯೂ ಡಾ॥ ಬಿ.ಎನ್.ಎಸ್ ಬೆಳಕು ಚೆಲ್ಲುತ್ತಾರೆ. ಒಟ್ಟಾಗಿ ಹೇಳಬೇಕೆಂದರೆ 'ಮಹಿಳೆ ಮತ್ತು ಸಾಹಿತ್ಯ' ಸ್ತ್ರೀವಾದಿ ವಿಮರ್ಶೆಯ ಚರಿತ್ರೆ ಹಾಗೂ ಭವಿಷ್ಯದ ದಾರಿ ಸೂಚಕವಾಗಿದೆ.

ಮಹಿಳೆಯರ ಇಂಥ ಹೋರಾಟದ ಸಾರವೇನು? ಅವರ ಜಗತ್ತುಗಳು ಹೇಗೆ ರೂಪುಗೊಂಡಿವೆ? ವ್ಯಕ್ತಿಗಳು, ವಸ್ತುಗಳು, ಕಥನಗಳು, ಭಾವಗೀತಾತ್ಮಕ ಹಾಗೂ ಕಲಾತ್ಮಕ ಯೋಜನೆಗಳನ್ನು ಈ ಲೇಖಕಿಯರು ಹೇಗೆ, ತಮ್ಮದೇ ಆದ ವಿಭಿನ್ನ ಪ್ರಯೋಜನಗಳಿಗಾಗಿ ಬಳಸಿಕೊಳ್ಳುತ್ತಾರೆ? ತಮ್ಮ ಬಗ್ಗೆ ಉದಾಸೀನವಾಗಿರುವ ಇಲ್ಲವೇ ವಿರೋಧಿಯೂ ಆದ ಸಂಕೇತಗಳ ಅರ್ಥ ಸಾಧ್ಯತೆಗಳನ್ನು ಮರುಳುಗೊಳಿಸಿ ತಮ್ಮ ಉದ್ದೇಶಕ್ಕೆ ಹೇಗೆ ಅವುಗಳನ್ನು ದುಡಿಸಿಕೊಳ್ಳುತ್ತಾರೆ? ತಮಗೆ ಪ್ರತಿಸ್ಪರ್ಧಾತ್ಮಕವಾಗಿರುವಂಥ ತಾತ್ವಿಕತೆಗಳ ಅಡ್ಡ ಬೇಲಿಗಳನ್ನು ದಾಟುತ್ತಾರೆ ಹೇಗೆ? ಅಥವಾ ತಮ್ಮ ಬಳಸು ಹಾದಿಗಳಲ್ಲಿ ಹಾದು ಹೋಗುತ್ತಾರೆ ಹೇಗೆ, ಇಲ್ಲವೇ obdurate ಆಗಿ ಅನೈತಿಕವಾದ ಆನಂದ–ಸುಖಗಳಿಗೆ ಅಂಟಿಕೊಳ್ಳುತ್ತಾರೆ? ಅವರ ಸ್ವ-ಪರಿಪೂರ್ಣತೆ, ಸತ್ವಗಳ ಕನಸುಗಳು ಯಾವ ಆಕಾರಗಳನ್ನು ಪಡೆದಿವೆ? ಅದಕ್ಕಾಗಿ ಅವರು ಯಾವ ಬಗೆಯಲ್ಲಿ ಪ್ರತಿಭಟನೆ ತೋರಿದ್ದರು? ತಮಗೆಂದೇ ಸಿದ್ಧವಾಗಿರುವ ಬದುಕಿನ ಯೋಜನೆಗಳನ್ನು ಹೇಗೆ ತಪ್ಪಿಸಿದ್ದಾರೆ? ಅಥವಾ ಅವುಗಳನ್ನೇ ಹೇಗೆ ಲೀಲಾಜಾಲವಾಗಿ ನಿರ್ವಹಿಸಿದ್ದಾರೆ? ಹೇಗೆ ಪ್ರಶ್ನಿಸಿದ್ದಾರೆ? 'ಮತ್ತೆ ಬರೆದ' ಬಗೆ ಹೇಗೆ? ಯಾವ ರೀತಿ ಪರಿವರ್ತನೆ ಮಾಡುತ್ತಾರೆ ಅಥವಾ ಸಮಸ್ಯೆಯ ತಳ ಅಳೆಯುತ್ತಾರೆ ಎಂಬ ರೀತಿಯ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವುದು ಮಹಿಳಾ ಸಾಹಿತ್ಯದ ಅಧ್ಯಯನದಲ್ಲಿ ಮುಖ್ಯವಾಗಬೇಕು.

– *ಚಂಪಾ*

# ಮಾದಕ ವಸ್ತುಗಳು ಮಕ್ಕಳ ಆಟಿಕೆಯಲ್ಲ !

ಯುವ ಜನಾಂಗ ಮಾದಕ ವಸ್ತುಗಳ ಸೇವನೆಯ ಚಟಕ್ಕೆ ಗುರಿಯಾಗುತ್ತಿರುವುದು ಇಂದು ಜಗತ್ತಿನ ಅತ್ಯಂತ ಆತಂಕಕಾರಿ ಬೆಳವಣಿಗೆ. ಸಿರಿಂಜ್ ಮೂಲಕ ಜಗತ್ತಿನಾದ್ಯಂತ ಲಕ್ಷಾಂತರ ಯುವಜನತೆ ಮಾದಕ ದ್ರವ್ಯ ತೆಗೆದುಕೊಳ್ಳುತ್ತಾ ಅರಿವಿಲ್ಲದಂತೆ ಹೆಚ್‌ಐವಿ ಸೋಂಕಿಗೆ ಬಲಿಯಾಗುತ್ತಿದ್ದಾರೆ. ಇದು ಅತ್ಯಂತ ಅಪಾಯಕಾರಿ ಸಾಮಾಜಿಕ ಪಿಡುಗು. ಭಾರತದಲ್ಲಿನ ಶೇಕಡ 2.24ರಷ್ಟು ಹೆಚ್‌ಐವಿ ಪ್ರಕರಣಗಳು ಈ ದುರಭ್ಯಾಸದ ಪರಿಣಾಮವಾಗಿದೆ.

- ಅಧ್ಯಯನಗಳ ಪ್ರಕಾರ ಎಲ್ಲಾ ವಯಸ್ಸಿನ ಮಕ್ಕಳು ಮಾದಕ ವಸ್ತುಗಳ ದುರುಪಯೋಗ ಮತ್ತು ಸಾಗಾಣಿಕೆಗೆ ತುತ್ತಾಗುತ್ತಿದ್ದಾರೆ. ಇಂಥ ಮಕ್ಕಳು ದುಶ್ಚಟ ಹಾಗೂ ಆತಂಕಕಾರಿ ನಡವಳಿಕೆಯನ್ನು ಬೆಳೆಸಿಕೊಳ್ಳುತ್ತಾರೆ.
- ಅನೇಕ ಸಂದರ್ಭಗಳಲ್ಲಿ ಹಿರಿಯರೂ ಸಹ ಮಾದಕ ವ್ಯಸನಿಗಳಾಗಿದ್ದು ಅಂತಹವರ ಮಕ್ಕಳು ಅನಾಥರಾಗುತ್ತಿದ್ದಾರೆ.
- ಶಾಲೆ/ಕಾಲೇಜುಗಳೂ ಈ ಸಮಸ್ಯೆಗೆ ಹೊರತಾಗಿಲ್ಲ. ಸಮಾನ ವಯಸ್ಕ ಗುಂಪಿನಲ್ಲಿರುವವರು ಮೊದಲಿಗೆ ಧೂಮಪಾನ, ಮದ್ಯಪಾನಕ್ಕೆ ನಂತರ ಅಪಾಯಕಾರಿ ಮಾದಕ ಪದಾರ್ಥಗಳಿಗೆ ಬಲಿಯಾಗಿ ವ್ಯಸನಿಗಳಾಗುತ್ತಾರೆ.
- ಇದನ್ನು ತಪ್ಪಿಸಲು ತಂದೆ-ತಾಯಿಯರು, ಶಿಕ್ಷಕರು, ಸಮಾಜ ಸೇವಕರು ಹಾಗೂ ಸಂಘಸಂಸ್ಥೆಗಳ ಮೇಲೆ ಮಹತ್ತರವಾದ ಜವಾಬ್ದಾರಿಯಿದೆ. ನಿಮ್ಮ ಪ್ರೀತಿ, ಆರೈಕೆ ಹಾಗೂ ಸೂಕ್ತ ಮಾರ್ಗದರ್ಶನಗಳಿಂದ ಈ ಪಿಡಗನ್ನು ತಡೆಗಟ್ಟಬಹುದು.

**ಮಕ್ಕಳು ಅಮಲಿನ ಬದುಕಿಗೆ ಬಲಿಯಾಗದಂತೆ**
**ತಡೆಯುವುದು ನಮ್ಮ ನಿಮ್ಮೆಲ್ಲರ ಜವಾಬ್ದಾರಿ**

ಸುವರ್ಣ ಕರ್ನಾಟಕದ ವರ್ಷ : 2006-07



ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018